

ಕನ್ನಡ ವಿಶ್ವವಿದ್ಯಾಲಯ
ಹಂಪಿ

೨೦೦೯-೧೦ನೇ ಸಾಲಿನ ಎಂ.ಫಿಲ್ ಪದವಿಯ ಪರೀಕ್ಷೆಗೆ ಸಂಬಂಧಿಸಿದಂತೆ ಕನ್ನಡ ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಲಾಗುತ್ತಿರುವ ಸಂಶೋಧನಾ ನಿಬಂಧ

# ಕುವೆಂಪು ಕಾದಂಬರಿಗಳಲ್ಲಿ ದಲಿತ-ಬಂಡಾಯದ ನೆಲೆಗಳು


ಸಂಶೋಧಕರು

ಎ.ಎಚ್.ಚಂದ್ರಶೇಖರ್

KVTMKS-00416
ಕನ್ನಡ ಎಂ.ಫಿಲ್. ವಿದ್ಯಾರ್ಥಿ (ಕ.ವಿ.ವಿ. ಹಂಪಿ)

ಮಾರ್ಗದರ್ಶಕರು

ಡಾ. ಮಳಲಿ ವಸಂತಕುಮಾರ್

ನಿವೃತ್ತ ಕನ್ನಡ ಪ್ರಾಧ್ಯಾಪಕರು
ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು





ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

೨೦೦೯-೧೦



ಕನ್ನಡ ವಿಶ್ವವಿದ್ಯಾಲಯ

ಹಂಪಿ

೨೦೦೯–೧೦ನೇ ಸಾಲಿನ ಎಂ.ಫಿಲ್ ಪದವಿಯ ಪರೀಕ್ಷೆಗೆ ಸಂಬಂಧಿಸಿದಂತೆ ಕನ್ನಡ ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಲಾಗುತ್ತಿರುವ ಸಂಶೋಧನಾ ನಿಬಂಧ

# ಕುವೆಂಪು ಕಾದಂಬರಿಗಳಲ್ಲಿ ದಲಿತ–ಬಂಡಾಯದ ನೆಲೆಗಳು

ಸಂಶೋಧಕರು

**ಎ.ಎಚ್.ಚಂದ್ರಶೇಖರ್**

**KVTMKS-00416**

ಕನ್ನಡ ಎಂ.ಫಿಲ್. ವಿದ್ಯಾರ್ಥಿ (ಕ.ವಿ.ವಿ. ಹಂಪಿ)

ಮಾರ್ಗದರ್ಶಕರು

**ಡಾ. ಮಳಲಿ ವಸಂತಕುಮಾರ್**

ನಿವೃತ್ತ ಕನ್ನಡ ಪ್ರಾಧ್ಯಾಪಕರು

ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

ಕುವೆಂಪು ವಿದ್ಯಾವರ್ಧಕ ಟ್ರಸ್ಟ್

ಜಯಲಕ್ಷ್ಮೀಪುರಂ, ಮೈಸೂರು

೨೦೦೯–೧೦

# ಮಾರ್ಗದರ್ಶಕರ ಪ್ರಮಾಣಪತ್ರ

೨೦೦೯-೧೦ನೇ ಸಾಲಿನಲ್ಲಿ ಕ್ರಮಸಂಖ್ಯೆ **KVTMKS-00416**ರ ಹಂಪಿ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಯ ವಿದ್ಯಾರ್ಥಿಯಾದ ಎ.ಎಚ್.ಚಂದ್ರಶೇಖರ್ ಅವರು ನನ್ನ ಮಾರ್ಗದರ್ಶನದಲ್ಲಿ **"ಕುವೆಂಪು ಕಾದಂಬರಿಗಳಲ್ಲಿ ದಲಿತ-ಬಂಡಾಯದ ನೆಲೆಗಳು"** ಎಂಬ ವಿಷಯವನ್ನು ಆಯ್ಕೆಮಾಡಿಕೊಂಡು ಸಂಶೋಧನಾ ನಿಬಂಧವನ್ನು ಸಿದ್ಧಪಡಿಸಿರುತ್ತಾರೆ.

ಈ ಸಂಶೋಧನಾ ನಿಬಂಧವನ್ನು ಶ್ರೀಯುತರು ಈ ಮೊದಲು ಭಾಗಶಃವಾಗಲಿ, ಪೂರ್ಣವಾಗಿಯಾಗಲಿ ಬೇರಾವುದೇ ಪದವಿ ಅಥವಾ ಡಿಪ್ಲೋಮೋಗಳಿಗಾಗಲಿ ಒಪ್ಪಿಸಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

**ಮೈಸೂರು**
೧೮-೦೮-೨೦೧೦

**(ಡಾ. ಮಳಲಿ ವಸಂತಕುಮಾರ್)**
**ಮಾರ್ಗದರ್ಶಕರು**
ನಿವೃತ್ತ ಕನ್ನಡ ಪ್ರಾಧ್ಯಾಪಕರು
ಮೈಸೂರು ವಿಶ್ವವಿದ್ಯಾನಿಲಯ
ಮೈಸೂರು

# ಅಭ್ಯರ್ಥಿಯ ಘೋಷಣಾ ಪತ್ರ

ಕನ್ನಡ ವಿಶ್ವವಿದ್ಯಾಲಯದಲ್ಲಿ ಎಂ.ಫಿಲ್. ಪದವಿ ವಿದ್ಯಾರ್ಥಿಯಾಗಿ ಅಧ್ಯಯನ ಮಾಡುತ್ತಿರುವ ನಾನು ಡಾ. ಮಳಲಿ ವಸಂತಕುಮಾರ್ ಅವರ ಮಾರ್ಗದರ್ಶನದಲ್ಲಿ ಎಂ.ಫಿಲ್ ಪದವಿಯ ಒಂದು ಭಾಗವಾದ ನಿಬಂಧ ರಚನೆಗೆ ಸಂಬಂಧಿಸಿದಂತೆ **"ಕುವೆಂಪು ಕಾದಂಬರಿಗಳಲ್ಲಿ ದಲಿತ-ಬಂಡಾಯದ ನೆಲೆಗಳು"** ಎಂಬ ವಿಷಯವನ್ನು ಆಯ್ಕೆ-ಮಾಡಿಕೊಂಡು ಸಂಶೋಧನ ನಿಬಂಧವನ್ನು ಸಿದ್ಧಪಡಿಸಿರುತ್ತೇನೆ. ಈ ಸಂಶೋಧನಾ ನಿಬಂಧವನ್ನು ಈ ಮೊದಲು ಭಾಗಶಃವಾಗಲಿ, ಪೂರ್ಣವಾಗಿಯಾಗಲಿ ಬೇರಾವುದೇ ಪದವಿ ಅಥವಾ ಡಿಪ್ಲೋಮೋಗಳಿಗಾಗಲಿ ಒಪ್ಪಿಸಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

**ಮೈಸೂರು**
೧೮-೦೮-೨೦೧೦

**(ಎ.ಎಚ್.ಚಂದ್ರಶೇಖರ್)**
ಕ್ರಮಸಂಖ್ಯೆ **KVTMKS-00416**
ಕನ್ನಡ ಎಂ.ಫಿಲ್ ವಿದ್ಯಾರ್ಥಿ
ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

# ಪರಿವಿಡಿ



***

# ಅಧ್ಯಾಯ – ೧

# ಕನ್ನಡದಲ್ಲಿ ದಲಿತ ಬಂಡಾಯ ಸಾಹಿತ್ಯದ ಹಿನ್ನೆಲೆ ಮತ್ತು ಸ್ವರೂಪ

**ಈ** ಅಧ್ಯಾಯದಲ್ಲಿ ದಲಿತ, ಬಂಡಾಯ ಪದದ ಅರ್ಥ, ದಲಿತ ಸಾಹಿತ್ಯ ಮತ್ತು ಬಂಡಾಯ ಸಾಹಿತ್ಯ ಹಾಗೂ ದಲಿತ–ಬಂಡಾಯ ಸಾಹಿತ್ಯದ ಒಟ್ಟು ಸ್ವರೂಪವನ್ನು ಕುರಿತು ಚರ್ಚಿಸಲಾಗಿದೆ.

'ದಲಿತ' ಶಬ್ದವನ್ನು ಇಂತಿಷ್ಟೇ ಎಂದು ವಿವರಿಸುವುದು ಸುಲಭವಾದ ಸಂಗತಿಯಲ್ಲ. ಈ ಪದವು ತುಂಬ ಸಂಕೀರ್ಣವೂ, ವ್ಯಾಪಕಾರ್ಥಿಯೂ ಆಗಿದೆ. ಆದರೂ ಹಲವರು ಈ ಶಬ್ದಾರ್ಥ ನಿರ್ಣಯಕ್ಕೆ ಶ್ರಮಿಸಿದ್ದಾರೆ.

" 'ದಲಿತ' ಎಂದರೆ Dust, Split, etc, opened, unfolded blown ಎಂಬುದಾಗಿ ಕಿಟಲ್ ಶಬ್ದಕೋಶದಲ್ಲಿ ವಿವರಿಸಲಾಗಿದೆ"[೧] ಕನ್ನಡ ಕಸ್ತೂರಿ ಕೋಶದಲ್ಲಿ 'ದಲಿತ' ಎಂದರೆ ದಲಿತ ಸಂ, ಒಡೆದ, ಅರಳಿದ, ಬಿರಿದ, ಮರ್ದಿಸಲ್ಪಟ್ಟ, ಸೋಲಿಸಲ್ಪಟ್ಟ ಎಂಬ ಅರ್ಥಗಳಿವೆ'.[೨] ಕನ್ನಡ ಸಾಹಿತ್ಯ ಪರಿಷತ್ತಿನ ನಿಘಂಟಿನಲ್ಲಿ ದಲಿತ ಪದವನ್ನು ಈ ರೀತಿ ಅರ್ಥೈಸಿದ್ದಾರೆ. ದಲಿತ, ದಳಿತ, ಹಿಂದುಳಿದವನು, ದಮನಕ್ಕೆ ಒಳಗಾದವನು, ದಮನಕ್ಕೆ ಒಳಗಾದವರು, ಶೋಷಿತಜನ, ಆರ್ಥಿಕವಾಗಿ, ಸಾಮಾಜಿಕವಾಗಿ ಕೆಳಮಟ್ಟದವರು".[೩]

ಈಗ ಕೆಲವರು ಪ್ರಸಿದ್ಧ ಲೇಖಕರು ದಲಿತ ಶಬ್ದವನ್ನು ಮತ್ತು ಆ ಚಳುವಳಿಯನ್ನು ಅರ್ಥೈಸಿ ವ್ಯಾಖ್ಯಾನಿಸಿರುವುದನ್ನು ನೋಡಬಹುದು. 'ದಲಿತ' ಎಂದರೆ ಮೇಲುಜಾತಿಯವರಿಂದ ಆರ್ಥಿಕ ಮತ್ತು ಸಾಮಾಜಿಕ ಶೋಷಣೆಗೆ ಒಳಗಾದ ಅಸ್ಪೃಶ್ಯ ಜಾತಿಗೆ ಸೇರಿದವರು. ಆ ಕಾರಣಕ್ಕಾಗಿಯೇ ಊರಹೊರಗೆ ವಾಸಿಸುವವರು".[೪] ದಲಿತ ಪದವನ್ನು ಕುರಿತು ದೇವಯ್ಯ ಹರವೆ ಹೀಗೆ ವ್ಯಾಖ್ಯಾನಿಸುತ್ತಾರೆ: "ಅಸ್ಪೃಶ್ಯ ಜನಾಂಗಕ್ಕೆ

---

೧. ಕಿಟ್ಟೆಲ್ಲರ ಕನ್ನಡ – ಇಂಗ್ಲಿಷ್ ಶಬ್ದಕೋಶ, ಪು. ೮೨೩, ನಾಲ್ಕನೇ ಸಂಪುಟ, ಮದ್ರಾಸು ವಿಶ್ವವಿದ್ಯಾಲಯ, ೧೯೬೭.

೨. ಕವಲಿ ಪಂಡಿತ ಜೆ.ಎ., ಕನ್ನಡ ಅರ್ಥಕೋಶ, ಪು. ೪೭೫, ಧಾರವಾಡ, ೧೯೭೧.

೩. ಕನ್ನಡ ಸಾಹಿತ್ಯ ಪರಿಷತ್ತು ನಿಘಂಟು, ನೃಪತುಂಗ ರಸ್ತೆ, ಸಾಹಿತ್ಯ ಪರಿಷತ್ ಭವನ, ಬೆಂಗಳೂರು, ೧೯೮೩.

೪. ತಿಮ್ಮೇಗೌಡ.ನೋ.ಸಂ., ದಲಿತ–ಬಂಡಾಯ ಸಾಹಿತ್ಯ ಮತ್ತು ಸಾಮಾಜಿಕ ನೆಲೆ, ಪು. ೧೬೬, ಋಜುವಾತು, ೧೯೮೫.

ಇಂಡಿಯಾದ್ಯಾಂತ ಹೊಂದಿಕೆಯಾಗಬಹುದಾದ ಒಂದೇ ಪದ 'ದಲಿತ' ಎಂಬುದು ಮಾತ್ರ"[೧] ಅರವಿಂದ ಮಾಲಗತ್ತಿಯವರು ಹೀಗೆನ್ನುತ್ತಾರೆ.

ದಲಿತ ಪದದ ಅರ್ಥವಿವರಣೆಯಲ್ಲಿ ಮೂರು ಪ್ರಮುಖವಾದಗಳಿವೆ.

ಅ) 'ಶೋಷಣೆ' ಎಂಬ ಪದಕ್ಕೆ ಜಾತಿಭೇದವಿಲ್ಲ. ಆರ್ಥಿಕ, ಸಾಮಾಜಿಕ, ರಾಜಕೀಯ ರಂಗದಲ್ಲೆಲ್ಲಾ ಶೋಷಣೆಗೆ ಒಳಗಾದ ಎಲ್ಲ ಜನರು ದಲಿತರು.

ಆ) ಅಸ್ಪೃಶ್ಯರು ಸೇರಿದಂತೆ, ಅಸ್ಪೃಶ್ಯತೆಯ ನೋವನ್ನು ಅನುಭವಿಸದಿದ್ದರೂ, ಅಸ್ಪೃಶ್ಯತೆಯ ಹಾಗೆಯೇ ಆರ್ಥಿಕ–ಸಾಮಾಜಿಕ–ರಾಜಕೀಯ ರಂಗದಲ್ಲಿ ಶೋಷಣೆಗೆ ಒಳಗಾದ ಜನರೂ ಸೇರಿ ದಲಿತರಾಗಿದ್ದಾರೆ.

ಇ) ಪಂಚಮರು ಅಥವಾ ಬಹಿಷ್ಕೃತರು ಎಂದು ಕರೆಯಿಸಿಕೊಳ್ಳುವ ಅಸ್ಪೃಶ್ಯರೆಲ್ಲರೂ ದಲಿತರು.[೨] ಡಾ. ಜಿ.ಎಸ್.ಶಿವರುದ್ರಪ್ಪನವರು ಶೋಷಿತ ಮತ್ತು ದಲಿತ ಪದಗಳ ನಡುವೆ ಗೆರೆ ಎಳೆದು, ಎಲ್ಲಾ ಜಾತಿಯಲ್ಲಿಯೂ ಶೋಷಿತರು ಇರುವರೆಂದೂ, ಆದರೆ ದಲಿತರು ಶೋಷಿತರಷ್ಟೇ ಅಲ್ಲ ಸಾಮಾಜಿಕ ಶೋಷಣೆಯ ಕಾರಣದಿಂದ ಪಶುಸಮಾನ ಬದುಕನ್ನು ಬದುಕಿದವರೆಂದು"[೩] ಅವರು ಹೆಳುತ್ತಾರೆ. ಈ ಅಭಿಪ್ರಾಯಗಳನ್ನೇ ಸಮರ್ಥಿಸುವಂತಿರುವ ಡಾ. ಯು.ಆರ್.ಅನಂತಮೂರ್ತಿಯವರ ವಿಚಾರಗಳು ಇಲ್ಲಿ ಉಲ್ಲೇಖನಿಯ. "ನಮ್ಮ ಹಿಂದೂ ಸಮಾಜದ ಚೌಕಟ್ಟಿನಲ್ಲಿ ಯಾವ ಜಾತಿಗಳು ತಮ್ಮ ಜಾತಿಗಳನ್ನು ಬಹಿರಂಗವಾಗಿ ಘೋಷಿಸಿಕೊಳ್ಳಲು ಸಾಧ್ಯವಿಲ್ಲವೋ ಅವೆ ಕೆಳಜಾತಿಗಳು"[೪] ದಲಿತ ಎಂದರೆ ಯಾರು ಹುಟ್ಟಿನಿಂದ ಅಸ್ಪೃಶ್ಯರಾಗಿದ್ದು, ನಿರಂತರವಾಗಿ ದಲಿತ ಮನೋಧರ್ಮವನ್ನು ಮೈಗೂಡಿಸಿಕೊಂಡು ದಲಿತಪರ ಕಾಳಜಿಯನ್ನು ಕಾಯ್ದು–ಕೊಳ್ಳುತ್ತಾರೋ ಅವನೇ ದಲಿತ"[೫]. ದಲಿತರೆಂದರೆ ಕೇವಲ ಪರಿಶಿಷ್ಟ ಜಾತಿ, ವರ್ಗ ಬುಡಕಟ್ಟುಗಳವರಲ್ಲ ಸಮಾಜದಲ್ಲಿ ದುರ್ಬಲವರ್ಗಕ್ಕೆ ಸೇರಿದವರೆಲ್ಲರನ್ನು ನಾವು

---

೧. ಮುನಿವೆಂಕಟಪ್ಪ.ಎ(ಡಾ), 'ಸಂಪಾದಕೀಯ' 'ದಲಿತ ಚಳುವಳಿ ಒಂದು ಅವಲೋಕನ' ವಿಚಾರವಾದಿ ಪ್ರಕಾಶನ, ಮೈಸೂರು, ೧೯೯೯.

೨. ಮಾಲಗತ್ತಿ ಅರವಿಂದ (ಡಾ.), ದಲಿತ ಸಾಹಿತ್ಯ ಚಳುವಳಿಯ ತಾತ್ವಿಕ ನೆಲೆಗಳು, ಮುದ್ದೆಬಿಹಾಳ, ೧೯೮೯.

೩. ಸಿದ್ದಲಿಂಗಯ್ಯ (ಡಾ), ದಲಿತ ಸಾಹಿತ್ಯ ಹಕ್ಕಿನೋಟ', ಪು. ೩೬, ಬೆಂಗಳೂರು, ೧೯೯೦

೪. ಸಾಹಿತ್ಯ ವಿಮರ್ಶೆ, ಪು.೩, ಬೆಂಗಳೂರು, ೧೯೮೮.

೫. ಮುನಿವೆಂಕಟಪ್ಪ.ಎ(ಡಾ), 'ಸಂಪಾದಕೀಯ' 'ದಲಿತ ಚಳುವಳಿ ಒಂದು ಅವಲೋಕನ' ಪು. ೩೭, ವಿಚಾರವಾದಿ ಪ್ರಕಾಶನ, ಮೈಸೂರು, ೧೯೯೯.

ದಲಿತರು ಎಂದು ಪರಿಭಾವಿಸಬೇಕಾಗಿದೆ"[೧] ಎಂಬ ಮಾತುಗಳು ಅರ್ಥಪೂರ್ಣ-ವಾಗಿವೆ.

ಬಂಡಾಯ ಶಬ್ದ 'ಬಂಡು' ಎಂಬ ಪದದಿಂದ ಬಂದಿದೆ. 'ಬಂಡು' ಎಂದರೆ 'ಹೀನ', 'ಅಶ್ಲೀಲ', ನಾಚಿಕೆಯಿಲ್ಲದ್ದು ಎಂದರ್ಥ. ಬಂಡಾಯ ಎನ್ನುವ ಪದವು 'ಜಗಳ', 'ಕಾಳಗ', 'ದಂಗೆ' ಎಂಬ ಅರ್ಥದಲ್ಲಿಯೂ ರೂಢಿಯಲ್ಲಿದೆ. "ಬಂಡಾಯ ಎನ್ನುವ ಪದವನ್ನು ಪ್ರತಿಭಟನೆ, ಹೋರಾಟ, ಕ್ರಾಂತಿ ಎನ್ನುವ ಅರ್ಥದಲ್ಲಿ ಉಪಯೋಗಿಸುತ್ತಿದ್ದೇವೆ. ಅದರಿಂದ 'ಬಂಡಾಯ' ನಮಗೆ ಹೊಸಪದ, ಹೊಸ ಅರ್ಥವನ್ನು ಹಾಗೂ ರೂಪಿಸಿಕೊಂಡ ಹೊಸನಾಣ್ಯ"[೨] ಬಂಡಾಯ, bandaya = ಬಣ್ಡಾಯ ಪದದ ಅರ್ಥ ಹೀಗಿದೆ: ಬಂಡಾಯ (ಕ) ನಾ, ಬಂಡೇಳುವಿಕೆ, ದಂಗೆ, ಜಗಳ, ಬಂಡು ಎಂದು ಅರ್ಥೈಸಿದ್ದಾರೆ".[೩] ಬಂಡಾಯ ಪದ ಸಂಸ್ಕೃತಿಯ 'ಭಣ್ಡ' ಮೂಲದಿಂದ ಬಂದಿದೆ. ಮೂಲಾರ್ಥ 'ಯುದ್ಧ' ಎಂದು. ಯಾವುದೋ ಒಂದು ವ್ಯವಸ್ಥೆಗೆ ಸೇರಿದ ವ್ಯಕ್ತಿ ಅಥವಾ ಗುಂಪು ಆ ವ್ಯವಸ್ಥೆಗೆ ವಿರುದ್ಧ ಯಾವುದೇ ಕಾರಣಕ್ಕೆ ಯುದ್ಧ ಸಾರುವುದನ್ನು 'ಬಂಡಾಯ'[೪] ಎನ್ನಬಹುದು. ನಮ್ಮ ಇವತ್ತಿನ ಅರ್ಥವೂ ಅದೇ. ಜಡ್ಡುಗಟ್ಟಿದ, ಮಾಲಿನ್ಯ ತುಂಬಿದ ಸಾಮಾಜಿಕ ವ್ಯವಸ್ಥೆಯ ವಿರುದ್ಧ ವ್ಯಕ್ತಿಗಳ ಮನಸ್ಸನ್ನು ತಿರುಗಿಸುವ ಅಂತಹ ಹೋರಾಟಕ್ಕೆ ಸನ್ನಿವೇಶವನ್ನು ನಿರ್ಮಿಸುವ ಉದ್ದೇಶಪೂರ್ಣ ಸಾಹಿತ್ಯ ಬಂಡಾಯ."[೫]

**ದಲಿತ ಬಂಡಾಯ ಸಾಹಿತ್ಯ:**

'ದಲಿತ ಸಾಹಿತ್ಯ'ವೆಂದರೆ ಹುಟ್ಟಿನಿಂದ ಅಸ್ಪೃಶ್ಯನಾದವನೊಬ್ಬ ಬರೆದ ಜನಪರ ಸಾಹಿತ್ಯ ಎಂದಿಟ್ಟುಕೊಳ್ಳಲಾಗಿದೆ. ಸಾಹಿತ್ಯದ ದೃಷ್ಟಿಯಿಂದ ಇದಕ್ಕೆ ಒಂದು ಬಗೆಯ ಅನನ್ಯತೆ ಪ್ರಾಪ್ತಿಸುತ್ತದೆ. ಅದನ್ನು ಅನಂತಮೂರ್ತಿಯವರು ಹೀಗೆ ವಿವರಿಸಿದ್ದಾರೆ. "ಒಬ್ಬ ಅವಮಾನಿತ ವ್ಯಕ್ತಿ ಸ್ವಾಭಿಮಾನಿಯೂ ಆದಾಗ ಹುಟ್ಟುವ ಸಾಹಿತ್ಯಕ್ಕೆ ಒಂದು ಗುಣವಿರುತ್ತದೆ. ಅದನ್ನು ನಾವು ಪ್ರಪಂಚದ ಎಲ್ಲಾ ಕಡೆಯೂ ಪ್ರತಿಭಟನಾ

---

೧. ಭಗವಾನ್, 'ಕುವೆಂಪು ಕಂಡ ದಲಿತ ಜೀವನ' ಬದಲಾವಣೆ, ಪು. ೧೫೮, ಮೈಸೂರು.

೨. ಪೋಲಂಕಿ ರಾಮಮೂರ್ತಿ, ಬಂಡಾಯಕಾವ್ಯ, ಪು. ೭೧, ಸಂಕ್ರಮಣ, ೧೯೮೫.

೩. ಕಾರಂತ ಶಿವರಾಮ, ಸಿರಿಗನ್ನಡ, ಅರ್ಥಕೋಶ, ಪು. ೮೫೬, ೧೯೮೧.

೪. ಸಿದ್ದಯ್ಯ.ಕೆ.ಬಿ., ಬೂದಾಳು ನಟರಾಜ, ಗೋವಿಂದಯ್ಯ.ಹೆಚ್.'ಏಕಲವ್ಯನ ಧ್ಯಾನ' (ಸಂ.) ದಲಿತ ಕಾವ್ಯ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೯೬.

೫. ರಾಮಸ್ವಾಮಿ.ಜೆ, 'ದಲಿತ ಬಂಡಾಯ ನವ್ಯೋತ್ತರ ಇತ್ಯಾದಿ' ಸಂಕ್ರಮಣ, ಪು. ೨೮-೨೯, ೧೯೭೯.

ಸಾಹಿತ್ಯವೆಂದು ಕರೆಯುತ್ತೇವೆ. ಹೀಗೆ ಅವಮಾನಿತ ಸ್ವಾಭಿಮಾನಿಯಾದವನು ಅಸ್ಪೃಶ್ಯನೂ ಆಗಿದ್ದಲ್ಲಿ ನಮ್ಮ ದಲಿತ ಸಾಹಿತ್ಯ ಹುಟ್ಟಬರುತ್ತದೆ. ಆದ್ದರಿಂದ ಅವಮಾನಿತರ ಜಾಗತಿಕ ಸಾಹಿತ್ಯದ ನಡುವೆ ಈ ಸಾಹಿತ್ಯಕ್ಕೊಂದು ಸ್ವರೂಪ ಇರುತ್ತದೆ".[೧] ದಲಿತ ಸಾಹಿತ್ಯವೆಂದರೆ ಮೇಲು ಜಾತಿಗಳಿಂದ ಆರ್ಥಿಕ ಮತ್ತು ಸಾಮಾಜಿಕ ಶೋಷಣೆಗೆ ಒಳಗಾಗಿ ಊರಬಾವಿಯಿಂದ ನೀರು ಕುಡಿಯಲೂ ಅವಕಾಶವಿಲ್ಲದ ಅಸ್ಪೃಶ್ಯಜಾತಿಗೆ ಸೇರಿದವರು ಮತ್ತು ಸಮಾಜದ ಉಳಿದ ಜಾತಿಗಳ ಮನುಷ್ಯ ಸಂದರ್ಭದಲ್ಲಿ ಬದುಕಲಾರದೆ ಊರ ಹೊರಗೆ ವಾಸಿಸುವವರ ಬದುಕಿಗೆ ಸಂಬಂಧಪಟ್ಟ ಸಾಹಿತ್ಯವೆಂದು ನಾನು ಗ್ರಹಿಸಿದ್ದೇನೆ".[೨] ಎಂಬುದು ನೋ.ಸಂ.ತಿಮ್ಮೇಗೌಡರ ಅಭಿಪ್ರಾಯವಾಗಿದೆ. "ದಲಿತರಾದವರು ತಮ್ಮ ರಕ್ತಮಾಂಸಗಳ ಜೀವಂತ ಅನುಭವ ಅನಿಸಿಕೆಯನ್ನು ಹಿಡಿದಿಟ್ಟಿರುವುದು ಮಾತ್ರ ದಲಿತ ಸಾಹಿತ್ಯ."[೩] ದೇವಯ್ಯ ಹರವೆಯವರ ನಿಲುವು ಹೀಗಿದೆ: "ನನಗೆ ದಲಿತ ಎನ್ನುವುದು ಒಂದು ಜಾತಿ ಅಷ್ಟೆ ಅಲ್ಲ. ಈ ದೇಶದ ರಕ್ತದಲ್ಲಿ ತುಂಬಿಕೊಂಡಿರುವ ದೇವರು, ಧರ್ಮ, ಪುನರ್‌ಜನ್ಮ, ಪವಿತ್ರ ಗ್ರಂಥಗಳು, ಸ್ವರ್ಗ-ನರಕ ಮುಂತಾದವುಗಳಲ್ಲಿ ನಂಬಿಕೆಯಿಲ್ಲ. ಏಕೆಂದರೆ ಅವುಗಳೆಲ್ಲಾ ಇವನನ್ನು ಗುಲಾಮನನ್ನಾಗಿ ಮಾಡಿರುವಂತಹವು. ಮಾನವೀಯತೆಯಲ್ಲಿ ಇವನಿಗೆ ನಂಬಿಕೆಯದೆ. ಬದಲಾವಣೆಯ ಮತ್ತು ಕ್ರಾಂತಿಯ ನಿಜವಾದ ಸಂಕೇತವೆ ಈ ಹೊತ್ತಿನ ದಲಿತ. ಅವನಿಂದ ಸೃಷ್ಟಿಗೊಂಡಿದ್ದ ದಲಿತ ಸಾಹಿತ್ಯ".[೪]

**ಬಂಡಾಯ ಸಾಹಿತ್ಯ**

ಬಂಡಾಯ ಸಾಹಿತ್ಯವನ್ನು ಕುರಿತು ಚಂದ್ರಶೇಖರ ಪಾಟೀಲರು "ನಮ್ಮ ಸಮಕಾಲೀನ ಬದುಕಿನ ಅನೇಕ ವೈರುಧ್ಯಗಳನ್ನು, ವೈಷಮ್ಯಗಳನ್ನು ಇತಿಹಾಸದ ಚೌಕಟ್ಟಿನಲ್ಲಿ ಗುರುತಿಸಿ, ಸಮಾನತೆ ಹಾಗೂ ನ್ಯಾಯ (Equality and Justice)ಗಳ ಮೌಲ್ಯಗಳನ್ನು ಆಧರಿಸಿದ ಸಮಾಜವನ್ನು ಪುನಾರ್ರಚಿಸಲು ಸೂಕ್ಷ್ಮ ಸಂವೇದನೆಯ

---

೧. ಅನಂತಮೂರ್ತಿ.ಯು.ಆರ್, ಸಾಹಿತ್ಯ ವಿಮರ್ಶೆ, ಪು. ೧೩, ಕಸಾಅ, ಬೆಂಗಳೂರು, ೧೯೯೩.

೨. ತಿಮ್ಮೇಗೌಡ,ನೋ.ಸಂ., ದಲಿತ-ಬಂಡಾಯ ಸಾಹಿತ್ಯ ಮತ್ತು ಸಾಮಾಜಿಕ ನೆಲೆ, ಪು. ೧೬೬, ಋಜುವಾತು, ೧೯೮೫.

೩. ಸರಜೂ ಕಾಟ್ಕರ್, 'ದಲಿತ – ಬಂಡಾಯ ಚಳುವಳಿ', ಕನ್ನಡ –ಮರಾಠಿ ಸಾಹಿತ್ಯದಲ್ಲಿ, ಕಸಾಅ, ಬೆಂಗಳೂರು, ೧೯೮೯.

೪. ರಾಮಸ್ವಾಮಿ.ಚ, ದಲಿತ-ಬಂಡಾಯ ನವ್ಯೋತ್ತರ ಇತ್ಯಾದಿ, ಪು. ೧೩೫, ಸಂಕ್ರಮಣ, ೧೯೮೨.

ಸಾಹಿತಿ ಸಾಹಿತ್ಯವನ್ನು ಬಳಸಿಕೊಂಡಾಗ ಅದು ಬಂಡಾಯ ಸಾಹಿತ್ಯವಾಗುತ್ತದೆ"[೧] ಎಂದು ಹೇಳುತ್ತಾರೆ. ರಹಮತ್ ತರೀಕೆರೆಯವರು ಪ್ರತಿಷ್ಠಿತ ಮೌಲ್ಯಗಳು ಜಡವಾಗಿ ಪ್ರತಿಗಾಮಿಯಾಗಿ ಬದುಕನ್ನು ಆವರಿಸಿಕೊಂಡಾಗ ಅವುಗಳ ವಿರುದ್ಧ ಹೋರಾಡುವುದೇ ಬಂಡಾಯ. ಇದು ಸಾಹಿತ್ಯದಲ್ಲಿ ಅಭಿವ್ಯಕ್ತಗೊಂಡಾಗ ಅದೇ ಬಂಡಾಯ ಸಾಹಿತ್ಯ"[೨] ಎನ್ನುತ್ತಾರೆ.

ಬಂಡಾಯ ಸಾಹಿತ್ಯವೆಂದರೆ ಎಲ್ಲಾ ಜಾತಿಗಳ ಮೇಲ್ವರ್ಗದವರ ತುಳಿತವನ್ನು ಮನುಷ್ಯರಲ್ಲಿನ ಅಸಮಾನತೆಯನ್ನು ವಸ್ತುವಾಗಿಟ್ಟುಕೊಂಡು ಬರೆದದ್ದು ಎಂದು ನಾನು ಗ್ರಹಿಸಿದ್ದೇನೆ. ಬದುಕಿನ ಎಲ್ಲಾ ಶೋಷಣೆಯ ಮೂಲಗಳಿಗೆ ಒಟ್ಟು ಪ್ರತಿಭಟನೆಯ ಧೋರಣೆಯನ್ನು ತಳೆದ ಸಾಹಿತ್ಯ ಬಂಡಾಯ ಸಾಹಿತ್ಯ"[೩] ಎಂಬುದು ನೋ.ಸಂ.ತಿಮ್ಮೇಗಾಡರ ವ್ಯಾಖ್ಯಾನವಾಗಿದೆ. "ಹೋಸ ಮನುಷ್ಯನನ್ನು ಹುಡುಕುವ, ವಿಶಾಲಮನಸ್ಸನ್ನು ಬೆಳೆಸುವ, ಜೀವನ ಪ್ರೀತಿಯ ಕಲಿಸುವ ಅನಿವಾರ್ಯ ಸತ್ಯವೇ ಬಂಡಾಯ. ಮಾನವೀಯ ಒಳನೋಟಗಳೇ ನಾಶವಾಗಿರುವಂತಹ ಸಂದರ್ಭದಲ್ಲಿ ಸಾಮಾನ್ಯ ಜನತೆಯ ನೆಮ್ಮದಿಯ ಬದುಕಿಗಾಗಿ ಶಿಸ್ತು, ಸಂಯಮಗಳಿಂದ ಪ್ರತಿಭಟಿಸುವುದೇ ಬಂಡಾಯ. ಚಲನಶೀಲವಾದುದನ್ನು ಉಳಿಸಿಕೊಂಡು ಸೃಜನಶೀಲವಾದುದನ್ನು ಬೆಳೆಸುವುದೇ ಬಂಡಾಯ"[೪] "ಶತಮಾನಗಳ ಕಾಲ ಅಕ್ಷರಜ್ಞಾನದ ಸವಲತ್ತುಗಳಿಂದ ವಂಚಿತನಾಗಿದ್ದು ಮತ್ತು ಮೇಲಿನ ಎಲ್ಲಾ ವರ್ಗದವರುಗಳಿಂದ ತುಳಿತಕ್ಕೆ ಒಳಗಾಗಿದ್ದ ಸಮಾಜದ ಕೆಳಗಿನ ಸ್ತರವೊಂದು ಮಾತನಾಡಲು ಕಲಿತು ತನ್ನ ಪ್ರತಿಭಟನೆಯನ್ನು ಅಭಿವ್ಯಕ್ತಪಡಿಸತೊಡಗಿದಾಗ ಮೂಡಿ ಬಂದಿತು ಬಂಡಾಯ ಸಾಹಿತ್ಯ."[೫] ಎಂದು ಜಿ.ಎಸ್.ಶಿವರುದ್ರಪ್ಪನವರು ಬಂಡಾಯ ಸಾಹಿತ್ಯವನ್ನು ಕುರಿತು ವ್ಯಾಖ್ಯಾನಿಸುತ್ತಾರೆ.

**ಕನ್ನಡದಲ್ಲಿ ದಲಿತ-ಬಂಡಾಯ ಸಾಹಿತ್ಯ:** ಕನ್ನಡದಲ್ಲಿ ಸೈದ್ಧಾಂತಿಕವಾಗಿ ಸಾಹಿತ್ಯ ರೂಪುಗೊಂಡದ್ದು ಜೈನರ ಕಾಲದಲ್ಲಿ ಪಂಪನಿಂದ ಪ್ರಾರಂಭಗೊಂಡು ಹನ್ನೊಂದನೆ

---

೧. ತರೀಕೆರೆ ರಹಮತ್, ಕನ್ನಡ ಕಾವ್ಯ ಮತ್ತು ಪ್ರತಿಭಟನೆ, ಸಂಕ್ರಮಣ, ೧೯೮೫, ಪು.೫೮

೨. ಅದೇ, ಪು. ೫೯

೩. ತಿಮ್ಮೇಗೌಡ,ನೋ.ಸಂ., ದಲಿತ-ಬಂಡಾಯ ಸಾಹಿತ್ಯ ಮತ್ತು ಸಾಮಾಜಿಕ ನೆಲೆ, ಪು. ೧೬೬, ಋಜುವಾತು, ೧೯೮೫.

೪. ಸಬರದ ಬಸವರಾಜ(ಡಾ) ವಚನಕಾರರು ಮತ್ತು ಬಂಡಾಯ ಪ್ರಜ್ಞೆ, ಪು. ೪೧, ಸಾಹಿತ್ಯ ಪರಿಷತ್ ಪತ್ರಿಕೆ, ೧೯೮೬.

೫. ಶಿವರುದ್ರಪ್ಪ.ಜಿ.ಎಸ್. (ಡಾ)ಬಂಡಾಯ ಸಾಹಿತ್ಯ ಕುರಿತು, ಪು. ೧೫, ಅನ್ವೇಷಣೆ, ೧೯೮೫.

ಶತಮಾನದ ನಯಸೇನನವರೆಗೂ ಜೈನ ಸಾಹಿತ್ಯ ಬೆಳೆಯಿತು. ಪಂಪಕವಿ ಮೊದಲಬಾರಿಗೆ ತನ್ನ ಕಾವ್ಯದಲ್ಲಿ ಬದಲಾವಣೆಯ ದಾರಿಯನ್ನು ಹಿಡಿದ. ಪಂಪ ಮೂಲತಃ ಬ್ರಾಹ್ಮಣ, ಆದರೆ ವೈದಿಕ ಧರ್ಮದಲ್ಲಿದ್ದ ಸಂಪ್ರದಾಯ, ಮೂಢನಂಬಿಕೆ, ಧಾರ್ಮಿಕ ಕಟ್ಟುಪಾಡುಗಳು ಅವನನ್ನು ಚಿಂತನೆಗೆ ಗುರಿಮಾಡಿದವು. ಇದರಿಂದ ಆತನು ಭ್ರಾಹ್ಮಣ ಜಾತಿಯನ್ನು ತೊರೆದು ಜೈನ ಧರ್ಮವನ್ನು ಅವಲಂಭಿಸುತ್ತಾನೆ. ಹೀಗೆ ಪಂಪ ವೈಯಕ್ತಿಕ ನೆಲೆಯಲ್ಲಿ ಹಾಗೂ ಕಾವ್ಯ ಮಾರ್ಗದಲ್ಲಿ ಬಂಡಾಯ ಮನೋವೃತ್ತಿಯನ್ನು ತಳೆಯುತ್ತಾನೆ. ವ್ಯಾಸನು ಮೂಲ ಭಾರತದಲ್ಲಿ ಧರ್ಮರಾಯನನ್ನು ನಾಯಕನನ್ನಾಗಿ ಮಾಡಿಕೊಂಡಂತೆ ಪಂಪ ಅರ್ಜುನನ್ನು ನಾಯಕನನ್ನಾಗಿ ಮಾಡಿಕೊಂಡ. ಹೀಗೆ ಪಂಪನಿಂದಲೇ ಬಂಡಾಯ ಪ್ರವೃತ್ತಿ ಮತ್ತು ಬದಲಾವಣೆಯನ್ನು ಕಾಣಬಹುದಾಗಿದೆ. ಪಂಪ ಅರಿಕೇಸರಿಯನ್ನು ನಾಯಕನನ್ನಾಗಿ ಮಾಡಿಕೊಂಡರೂ ಆತನ ಆಂತರಿಕ ತುಮುಲ, ಸಾಮಾಜಿಕ ಕಳಕಳಿ, ದಲಿತಪರವಾದ ಕಾಳಜಿ ಇದ್ದದ್ದು ಕರ್ಣನ ಮೇಲೆ. ಅವನು ಕರ್ಣನನ್ನು ಕುರಿತು "ಕರ್ಣನ ಕಡುನನ್ನಿ ಕರ್ಣನಳವಂಕದ ಕರ್ಣನ ಜಾಗಮೆಂದು ಕರ್ಣನ ಪಡೆಮಾತಿನೊಳ್ ಪುದಿದು ಕರ್ಣರಸಾಯನಮಲ್ತೆ ಭಾರತಂ"[೧] ಎಂದಿದ್ದಾನೆ. ಒಂದರ್ಥದಲ್ಲಿ ಪ್ರಾರಂಭದಿಂದ ಹನ್ನೆರಡನೇ ಶತಮಾನದವರೆಗಿನ ಸಾಹಿತ್ಯದಲ್ಲಿ ದಲಿತ-ಬಂಡಾಯಪರವಾದ ನಿಲುವುಗಳು ವಿರಳವೆಂದೆ ಹೇಳಬಹುದು.

ಕನ್ನಡ ಸಾಹಿತ್ಯದಲ್ಲಿ ನಿಜವಾದ ಕ್ರಾಂತಿ ಅಥವಾ ಬಂಡಾಯ ಮಾಡಿದವರೆಂದರೆ ವಚನಕಾರರು. "ಸಮಾಜದಲ್ಲಿ ಜಡ್ಡುಗಟ್ಟಿ ನಿಂತಿದ್ದ ಅಸಮಾನತೆ, ಅನ್ಯಾಯ, ಸಾಮಾಜಿಕ ಆರ್ಥಿಕ ಶೋಷಣೆ, ಧರ್ಮದ ಹೆಸರಿನಲ್ಲಿ ಮೋಸ ವಂಚನೆ ಈ ಎಲ್ಲ ಪ್ರವೃತ್ತಿಗಳ ವಿರುದ್ಧ ವಚನಕಾರರು ಸಿಡಿದೆದ್ದರು. ವಚನಗಳನ್ನು ವಾಚಿಸುವುದರ ಮೂಲಕ ಜನಸಾಮಾನ್ಯರ ನೋವಿಗೆ ಅವರ ಹೃದಯಕ್ಕೆ ಸ್ಪಂದಿಸುವ ಕೆಲಸವನ್ನು ಮಾಡಿದರು. ಬಸವಣ್ಣನನ್ನು ಕೇಂದ್ರವಾಗಿಟ್ಟುಕೊಂಡು ವಚನ ಚಳುವಳಿಯ ಅಕ್ಕಮಹಾದೇವಿ, ಸಿದ್ಧರಾಮ, ಅಲ್ಲಮಪ್ರಭು, ಚನ್ನಬಸವಣ್ಣ, ಜೇಡರದಾಸಿಮಯ್ಯ, ಮುಕ್ತಾಯಕ್ಕ ಮುಂತಾದವರಿಂದ ಸೃಷ್ಟಿಗೊಂಡು ಫಲಪ್ರದವಾಗಿ ಬೆಳೆಯಿತು."[೨] ಎಂಬುದು ವಚನ ಚಳುವಳಿಯ ನೆಲೆಯನ್ನು ಹೇಳುತ್ತದೆ.

---

೧. ವೆಂಕಟಚಲಶಾಸ್ತ್ರೀ.ಟಿ.ವಿ. ಭಾರತೀಯ ಸಾಹಿತ್ಯ (ಸಂ) ಪಂಪಭಾರತ, ಕೃತಿ ಸಮೀಕ್ಷೆ, ಪಂಪ, ನವದೆಹಲಿ, ೧೯೯೧.

೨. ದುಂಡಪ್ಪ ಹೆಚ್. ಮದ್ಯಕಾಲೀನ ಕನ್ನಡ ಸಾಹಿತ್ಯಲದಲ್ಲಿ ಸಂವೇದನೆಯ ನೆರಳು. ಪು. ೧೦೪, ಕಸಾಅ. ಬೆಂಗಳೂರು, ೧೯೯೨.

ಬಸವರಾಜ ಸಬರದರವರು "ದಲಿತರು-ಶೋಷಿತರು-ಕೆಳವರ್ಗದವರು ಮೊದಲಬಾರಿಗೆ ಸಾಹಿತ್ಯದ ಮುಖಾಂತರ ಮಾತನಾಡಿದ್ದು ವಚನ ಚಳುವಳಿಯಲ್ಲಿ ಅರಮನೆಯಿಂದ ಹೊರಬಂದು ರಾಜಾಶ್ರಯದಿಂದ ದೂರವಾಗಿ ಪಂಡಿತರ ಕಪಿಮುಷ್ಠಿಯಿಂದ ಪಾರಾಗಿ ಬಂದ ಕನ್ನಡ ಸಾಹಿತ್ಯ ಸಹಜವಾಗಿ ಉಸಿರಾಡಿದ್ದು ನೆಲದ ಮಾತಿನಲ್ಲಿ ನಳನಳಿಸಿದ್ದು ವಚನಕಾರರಲ್ಲಿ ಮಾತ್ರ".[೧] ಸಂಪತ್ತಿನ ಕುರುಹಾಗಿ ಹಿಂದೆ ರಾಜರು ದೇವಾಲಯಗಳನ್ನು ಕಟ್ಟಿಸುತ್ತಿದ್ದರು. ಅದರೊಳಕ್ಕೆ ಅಸ್ಪೃಶ್ಯರು ಬರಬಾರದೆಂಬ ವಿರೋಧವು ಇತ್ತು. ಇದನ್ನು ಗಮನಿಸಿದ ವಚನಕಾರರು ಅಸ್ಪೃಶ್ಯತೆಯ ಪರನಿಂತು ಅಸ್ಪೃಶ್ಯರ ಪ್ರವೇಶವಿಲ್ಲದ ಈ ದೇವಾಲಯಗಳೇ ಬೇಡವೆಂದರು. ದೇವರ ಕಲ್ಪನೆಯನ್ನೇ ಬೇರು ಸಹಿತ ಕಿತ್ತು ಹಾಕಿದರು. ಇಂಥದೆ ಸಮಸ್ಯೆಯನ್ನು ತುಂಬಿಕೊಂಡಿರುವ ಬಸವಣ್ಣನ ವಚನವೊಂದು ಹಸಿ ಅನುಭವವನ್ನು ನೀಡುತ್ತದೆ.

"ಉಳ್ಳವರು ಶಿವಾಲಯವ ಮಾಡುವರು
ನಾನೇನ ಮಾಡುವೆ ಬಡವನಯ್ಯ
ಎನ್ನ ಕಾಲೇ ಕಂಬ ದೇಹವೇ ದೇಗುಲ
ಶಿರವೆ ಹೊನ್ನ ಕಳಸವಯ್ಯ"[೨]

ಈ ಪರಿಕಲ್ಪನೆಗೆ ಪರಂಪರಾಗತವಾಗಿದ್ದ ದೇವಸ್ಥಾನ ಕಲ್ಪನೆಗಿಂತ ಬೇರೆಯಾಗಿದ್ದು ಮಾನವನನ್ನೇ ಕೇಂದ್ರಿಕರಿಸಿಕೊಂಡಿರುವುದನ್ನು ಗಮನಿಸಬಹುದು. ಹರಿದಾಸ ಸಾಹಿತ್ಯದಲ್ಲಿ ಪ್ರಮುಖರೆಂದರೆ ಕನಕದಾಸರು. ಹಿಂದುಳಿದ ಜಾತಿಯಿಂದ ಬಂದ ಕನಕದಾಸರು ಸಮಾಜದ ಆರ್ಥಿಕ ಅಂತರಾಳವನ್ನು, ಅಸಮಾನತೆಯನ್ನು ತಮ್ಮ ಸಾಹಿತ್ಯದಲ್ಲಿ ಮೂಡಿಸಿದರು. **'ರಾಮಧಾನ್ಯ ಚರಿತೆ'**ಯ ಒಂದು ಉದಾಹರಣೆಯನ್ನು ನೋಡಬಹುದು. ಇದರಲ್ಲಿ ಭತ್ತವನ್ನು ಮೇಲುಜಾತಿಗೂ, ರಾಗಿಯನ್ನು ಕೀಳುಜಾತಿಗೂ ಸಮೀಕರಿಸಲಾಗಿದೆ. ಹಾಗೆಯೇ ಅದಕ್ಕೆ ಒಂದು ಪೌರಾಣಿಕ ಪರಿವೇಷವನ್ನು ಸೃಷ್ಟಿಸಿ ಅವೆರಡರ ನಡುವೆ ನೇರ ಸ್ಪರ್ಧೆಯನ್ನೇರ್ಪಡಿಸುವ ಕವಿ ಕನಕದಾಸ ತನ್ಮೂಲಕ ಭತ್ತ ಮತ್ತು ರಾಗಿಗಳ ಬಗ್ಗೆ ಈ ತೀರ್ಮಾನಕ್ಕೆ ಬರುತ್ತಾನೆ.

---

೧. ಬಸವರಾಜ ಸಬರದ, ವಚನ ಚಳುವಳಿ - ಒಂದು ನೋಟ, ಪಲ್ಲವಿ ಪ್ರಕಾಶನ, ಪು. ೩, ೧೯೯೨, ಗುಲಬರ್ಗಾ.

೨. (ಸಂ) ಬಸವರಾಜು ಎಲ್. ಬಸವಣ್ಣನವರ ವಚನಗಳು, ಪು. ೧೫೪, ಗೀತಾಬುಕ್ ಹೌಸ್, ಮೈಸೂರು, ೧೯೯೨.

"ಹೆತ್ತ ಬಾಣಂತಿಯರಿಗೆ ರೋಗಿಗೆ
ಪತ್ಯಪಾನಾದಿ ಹೆಣದ ಬಾಯಿಗೆ
ತುತ್ತು ನೀನಹೆ ನಿನ್ನ ಜನ್ಮ ನಿರರ್ಥಕವೆಂದ"[೧]

ಸರ್ವಜ್ಞ ಕನಕದಾಸರ ಸಮಕಾಲಿನರು. ತನಗೆ ಸರಿ ಎನಿಸಿದ್ದನ್ನು ಯಾವುದೇ ಮುಲಾಜಿಗೆ ಒಳಗಾಗದೆ ಖಡಾಖಂಡಿತವಾಗಿ ಅಭಿವ್ಯಕ್ತಿಸುತ್ತ ಬಂದವನು. ಹಾಗೆ ಆತನೊಬ್ಬ ಸುಧಾರಣವಾದಿ. ಸಮಾಜವನ್ನು ವಾಸ್ತವಿಕ ನೆಲೆಯಲ್ಲಿ ಪರಿಷ್ಕರಿಸಬೇಕೆಂಬ ಬಲವಾದ ಒತ್ತಡದಿಂದಾಗಿ ಅವನ ಆಂತರ್ಯದಿಂದ ವಚನಗಳು ಸಾಮಾಜಿಕ ಸ್ಥಿತಿಯ ವ್ಯಾಖ್ಯಾನ, ವಿಶ್ಲೇಷಣೆಗಳಂತಿವೆ. ಆತನ ವಚನಗಳಲ್ಲಿ ಗುರು ಮತ್ತು ರಾಜರ ವಿರೋಧದ ಬಗ್ಗೆ ಧ್ವನಿಗಳಿರುವಂತೆ ಪೌರಾಣಿಕ ಪ್ರಪಂಚವನ್ನು ತಿರಸ್ಕಾರದಿಂದ ಕಾಣುವ ಮನಸ್ಸಿದೆ. ಎಲ್ಲಾ ಸಂಪ್ರದಾಯದ ಸಂಕೋಲೆಗಳನ್ನು ನಿರಾಕರಿಸುವ ಪ್ರವೃತ್ತಿಯಿದೆ. ಮನುಷ್ಯ ಯಾವುದೇ ಜಾತಿಗೆ ಸೇರಿರಲಿ ಅವನ ಗುಣವನ್ನು ತಿಳಯುವ ಹಂಬಲ ಪ್ರವೃತ್ತಿಗಳು ಈತನ ವಚನಗಳಲ್ಲಿ ಕಂಡುಬರುತ್ತವೆ.

"ಜಾತಿಹೀನನ ಮನೆಯ ಜ್ಯೋತಿ ತಾ ಹೀನವೇ
ಜಾತಿವಿಜಾತಿಯೆನಬೇಡ ದೇವನೊಲಿ
ದಾತನೇ ಜಾತ ಸರ್ವಜ್ಞ"[೨]

ಹುಟ್ಟಿನಿಂದ ಜಾತಿ ನಿರ್ಧಾರಿತವಲ್ಲ ಎನ್ನುವಾಗ ಹೊಸ ಮನುಷ್ಯನ ಕಲ್ಪನೆಯಿದೆ.

ನವೋದಯದ ಪ್ರಮುಖ ಕವಿಗಳಾದ ಕುವೆಂಪುರವರಲ್ಲಿ ಬಂಡಾಯದ ಪ್ರವೃತ್ತಿಯನ್ನು ಕಾಣಬಹುದು. ಅವರ ಒಟ್ಟು ಸಾಹಿತ್ಯವೆ ಬಂಡಾಯ ಪರವೆಂದು ಹೇಳಬಹುದು. ಶೂದ್ರತಪಸ್ವಿ, ಏಕಲವ್ಯ, ಜಲಗಾರ, ಸಾಲದಮಗು, ಕರಿಸಿದ್ದ ಮುಂತಾದ ಕೃತಿಗಳು ಇವುಗಳಿಗೆ ಜ್ವಲಂತ ನಿದರ್ಶನಗಳಾಗಿವೆ. 'ಧನ್ವಂತರಿ ಚಿಕಿತ್ಸೆ' ಯಂತೂ ರೈತರ ಶೋಷಣೆಯನ್ನು ಹೃದಯಂಗಮವಾಗಿ ಚಿತ್ರಿಸುತ್ತದೆ. ಅವರ 'ಕಲ್ಕಿ' ಕವನವಂತು ಬಂಡಾಯದ ಅತ್ಯುನ್ನುತವಾದ ಕಥಾವಸ್ತು. ಈ ಕವಿತೆಯಲ್ಲಿ ಕಂಡುಬರುವುದು ವರ್ಗಹಿಂಸೆಯ ಅಸಮಾನತೆಯ ಚಿತ್ರಣ. ಅಸಮಾನತೆಯ ಕಾರಣದಿಂದಲೇ ಹಿಂಸೆ ಸ್ಫೋಟಿಸುತ್ತದೆ. ಕಲಿಯುಗದ ಅಂತ್ಯವನ್ನು ಸೂಚಿಸುವ ಕಲ್ಕಿ ಹಾಗೂ ಬಂಡಾಯವನ್ನು ಇಲ್ಲಿ ಸಮೀಕರಿಸಲಾಗಿದೆ. ಆತನ ಬಡಬಾಗ್ನಿ ಎಲ್ಲವನ್ನು

೧. ಜವರಯ್ಯ ಮ.ನ. (ಡಾ) ವೈದಿಕ ಪರಂಪರೆ ಹಾಗೂ ಕನಕದಾಸ ಬಂಡಾಯದ ನೆಲೆ, ಪು. ೬೭, ಪರಂಪರೆ ಹಾಗೂ ದಲಿತ ಬಂಡಾಯ ಸಾಹಿತ್ಯ ಸಮಗ್ರ ಅಧ್ಯಯನ, ೧೯೮೭.

೨. ತಿಪ್ಪೇಸ್ವಾಮಿ ಜಿ.ಆರ್. ಮಧ್ಯಕಾಲೀನ ಸಾಹಿತ್ಯದಲ್ಲಿ ಬದಲಾದ ಮನುಷ್ಯನ ಪರಿಕಲ್ಪನೆ, ಪು. ೯೫, ಕನ್ನಡ ಸಾಹಿತ್ಯದಲ್ಲಿ ಮನುಷ್ಯನ ಪರಿಕಲ್ಪನೆ, ಕಸಾಅ, ಬೆಂಗಳೂರು, ೧೯೯೨.

ನಾಶಮಾಡುವ ಬಡಬಾಗ್ನಿಯಾಗಿದೆ. ಒಳಿತು-ಕೆಡಕುಗಳೆರಡೂ ಅದರಲ್ಲಿ ಕೊಚ್ಚಿ ಹೋಗುತ್ತಲಿವೆ. ಎಲುಬಿನ ಕುದುರೆಯನ್ನು ಏರಿದ ಎಲುಬಿನ ಆಳಾಗಿರುವ ಕಲ್ಕಿ

"ಹಸಿವೇ ದಾಹಾ ಎನ್ನುತ ಬಂದು
ರಕ್ತಾ ರಕ್ತಾ ರಕ್ತಾ ಎಂದು
ನೆತ್ತರು ಹೊಳೆಯಲಿ ಧುಮುಕಿದನು
ಕುದುರೆಯೊಡನೆ ಧುಮ್ಮಿಕಿದನು
ಕುಡಿದನು ರಕ್ತವ ಮೊಗೆ ಮೊಗೆದು
ತಿಂದನು ತಲೆಗಳ ತೆಗೆ ತೆಗೆದು
. . . . . . . . . . . . . . . .
ಕಲ್ಕಿ ಕಲ್ಕಿ ಎನ್ನುತ ಚೀರಿ
ಕನಸೊಡೆದೆದ್ದೆ
ಇನ್ನೆಲ್ಲಿಯ ನಿದ್ದೆ"[೧]

ಕನ್ನಡದಲ್ಲಿ ಇಷ್ಟು ವಿವರವಾಗಿ ಹಿಂಸೆಯನ್ನು ನಾಟ್ಯೀಕರಿಸುವ ಕವನ ಇನ್ನೊಂದಿಲ್ಲ. ಇದು ಸಾಮಾಜಿಕ ವೈರುಧ್ಯಗಳು, ಬಿರುಕುಗಳು, ಮುಟ್ಟಬಹುದಾದ ಕೊನೆಯನ್ನು ಕುರಿತ ಬೀಕರವಾದ ಕನಸು. ಅವರ 'ಕಾನೂರು ಹೆಗ್ಗಡತಿ' ಮತ್ತು 'ಮಲೆಗಳಲ್ಲಿ ಮದುಮಗಳು' ಎರಡು ಬೃಹತ್ತಾದ ಕಾದಂಬರಿಗಳು. ಈ ಎರಡು ಕಾದಂಬರಿಗಳಲ್ಲಿ ಬಂಡಾಯದ ಹಲವು ಮಜಲುಗಳು ದಾಖಲಾಗಿರುವುದನ್ನು ನೋಡಬಹುದು. ಪ್ರಧಾನವಾಗಿ ಕುವೆಂಪು ಯಜಮಾನ ಸಂಸ್ಕೃತಿಯ ವಿರೋಧಿ. ಈ ಸಂಸ್ಕೃತಿಯ ಪ್ರತೀಕವಾದ ಮಠಮಾನ್ಯಗಳನ್ನು, ದೇವರು, ದೇವಸ್ಥಾನಗಳನ್ನು, ಜಾತಿ ಮತಗಳನ್ನು, ಪುರೋಹಿತಶಾಹಿಯನ್ನು ವಿರೋಧಿಸಿದವರು. ತಮ್ಮ ಪ್ರಬಲವಾದ ವೈಚಾರಿಕ ನಿಲುವಿನಿಂದ ಯಜಮಾನ ಸಂಸ್ಕೃತಿಯ ಎಲ್ಲ ರೀತಿಯ ಶೋಷಣೆಗಳ ವಿರುದ್ಧ ಸಿಡಿದು ನಿಂತರು. ನೂರು ದೇವರನೆಲ್ಲ ನೂಕಾಚೆದೂರ, ಗುಡಿಚರ್ಚು ಮಸಿದಿಗಳನ್ನು ಬಿಟ್ಟು ಹೊರಬನ್ನಿ ಎಂದು ಯುವ ಜನತೆಗೆ ಕ್ರಾಂತಿಯ ಕರೆ ಇತ್ತರು.

ಭಾರತೀಯ ಸಂಸ್ಕೃತಿಯ ಅಂಧಾನುಕರಣೆ ಇವರಿಂದಾಗಲಿಲ್ಲ. ಇವರ ಪರಿಧಿಗೆ ಬರುವ ಪ್ರತಿಯೊಂದು ತತ್ವವೂ ಹೊಸಹುಟ್ಟನ್ನು ಪಡೆಯಿತು. ವೈದಿಕ ಪರಂಪರೆಯ ಜಡನಿಲುವುಗಳನ್ನು ವಿರೋಧಿಸುತ್ತಲೇ ತನ್ನ ಕಾಲದ ಎಲ್ಲ ವೈಚಾರಿಕ

---

೧. (ಸಂ) ಸಿ.ಪಿ.ಕೆ. ಕಲ್ಕಿ ಕವನ, ಪು. ೮೧-೮೨, ಆಯ್ದ ಕವನಗಳು, ಚೇತನ ಬುಕ್ ಹೌಸ್, ಮೈಸೂರು, ೧೯೮೯.

ಅವಶ್ಯಕತೆಗಳನ್ನು ಪೂರೈಸಲು ನೆರವಾಗುತ್ತಾರೆ ಕುವೆಂಪು. ಹೊಸತನ್ನು ಸೃಷ್ಟಿಸುತ್ತಿದ್ದೇವೆಂಬ ಅಹಂ ಇಲ್ಲದೆ ಪ್ರಜ್ಞಾಪೂರ್ವಕವಾಗಿಯೋ, ಪ್ರಾಚೀನವಸ್ತು ನಿಷ್ಠತೆಗೂ, ಆಧುನಿಕ ವಸ್ತುನಿಷ್ಠತೆಗೂ ತಮ್ಮ ಬರಹಗಳ ಮುಖಾಂತರ ಸೇತುವೆಯನ್ನು ರಚಿಸಿದ್ದಾರೆ. ಕುವೆಂಪು ಭಾರತೀಯ ಪರಂಪರೆಯ ಸಾರಸರ್ವಸ್ವವನ್ನು ಹೀರಿ ಬೆಳೆದವರು. ಹಿಂದಿನ ಪರಂಪರೆಯನ್ನು ಅರ್ಥ ಮಾಡಿಕೊಂಡು ಅದರೊಡನೆ ಫಲಪ್ರದವಾದ ಸಂಬಂಧವನ್ನು ಬೆಳೆಸಿಕೊಂಡು ಮುಂದುವರಿಸುವ ಉಜ್ಜುಗದಲ್ಲಿ ತೊಡಗಿದವರು. "ಪೂರ್ವಯುಗಧನುಭವ ತಳಹದಿಯ ಮೇಲೆಯೇ ಬರುವ ಕಾಲದ ಭವ್ಯಮಂದಿರವನ್ನು ನಿರ್ಮಿಪೆನ್" ಎನ್ನುವರು. ಪರಂಪರೆಯ ಬಗೆಗಿನ ಅವರ ಆಶಯ. ಅವರು ಮನನ ಮಾಡಿದ ಪಾಶ್ಚಾತ್ಯ ಸತ್ವಸಾರವೆಲ್ಲಾ ಭಾರತೀಯ ತತ್ವಶಾಸ್ತ್ರದ ಅರಿವಿನ ಬುನಾದಿಯ ಮೇಲೆ ಅರಳಿದ್ದರಿಂದ ಅವರಲ್ಲಿ ಪೂರ್ಣದೃಷ್ಟಿ, ಸರ್ವೋದಯ, ಸಮನ್ವಯಗಳು ಬೆಳೆದು ಅವರೊಬ್ಬ ನಿಜವಾದ ಮಾನವತಾವಾದಿಯಾದರು. ದಾರ್ಶನಿಕರಾದರು, ವಿಚಾರವಾದಿಯಾದರು.

" 'ಶೂದ್ರತಪಸ್ವಿ' ನಾಟಕವಂತೂ ಭಾರತೀಯ ವೈದಿಕ ಮೌಲ್ಯಗಳ ಬುಡವನ್ನೇ ಅಲ್ಲಾಡಿಸಿಬಿಟ್ಟಿತು. ನಾಟಕ ಪ್ರಕಟವಾದಾಗ ಯಜಮಾನ ಸಂಸ್ಕೃತಿಯ ಗುತ್ತಿಗೆದಾರರೆಲ್ಲರೂ ಕುವೆಂಪು ಅವರ ವಿರುದ್ಧ ದಂಗೆ ಎದ್ದರು. ಶೂದ್ರ ತಪಸ್ವಿ ನಾಟಕದ ಶಂಬೂಕ ಪ್ರಸಂಗ ಯಜಮಾನ ಸಂಸ್ಕೃತಿಯನ್ನು ಪ್ರಶ್ನಿಸುವ ಮನೋಧರ್ಮಕ್ಕೆ ಸಾಕ್ಷಿಯಾಗಿ ನಿಲ್ಲುತ್ತದೆ. ವೈದಿಕ ವಿದ್ಯೆಯನ್ನು ಮುರಿದು ಹೊಸದಾಗಿ ಕಟ್ಟುವ ಪ್ರಕ್ರಿಯೆ ಇಲ್ಲಿದೆ."[೧]

ವಾಲ್ಮೀಕಿ ರಾಮಾಯಣದ ಎಲ್ಲಾ ಪಾತ್ರಗಳು ಕುವೆಂಪು ಅವರ 'ಶ್ರೀರಾಮಾಯಣ ದರ್ಶನಂ'ದಲ್ಲಿ ಮರುಹುಟ್ಟು ಪಡೆದವು. ಪಾಪಿಗೂ ಸಹ ಇಲ್ಲಿ ಉದ್ಧಾರವಿದೆ ಎನ್ನುವ ಸತ್ಯವನ್ನು ಜಗತ್ತಿಗೆ ತೋರಿಸಿಕೊಟ್ಟರು. ವಾಲ್ಮೀಕಿಯ ಕಾಮುಕ ಕ್ರೂರಿ , ರಾವಣ, ಕುವೆಂಪು ಅವರ ಅಗ್ನಿ ದಿವ್ಯದಲ್ಲಿ ಮಿಂದು (ಶ್ರೀರಾಮಾಯಣದ) ಶ್ರೀ ರಾವಣನಾದ. ಅರಾವಣನಾದ. ಶ್ರೇಷ್ಠ ಸಂಸ್ಕಾರ ಚೇತನ ಮಾತ್ರ ಇಂತಹ ದೃಷ್ಟಿ ಕೋನವನ್ನು ಹೊಂದಿರಲು ಸಾಧ್ಯ. ವಾಲ್ಮೀಕಿಯ ಮಂಥರೆ ಶ್ರೀರಾಮಾಯಣದರ್ಶನಂ ನಲ್ಲಿ ಪೂಜ್ಯಳಾದಳು, ಊರ್ಮಿಳಾ ತಪಸ್ವಿನಿಯಾದಳು.

---

೧. ಚಕ್ಕೆರೆ ಶಿವಶಂಕರ್ (ಸಂ)- ಸಹ್ಯಾದ್ರಿಯ ಸೂರ್ಯ ಪ್ರಸ್ತಾವನೆ, ಬದುಕು ಕಲಿಸದ ಲೋಕಗುರು xviii ಎರಡನೇ ಮುದ್ರಣ, ೨೦೧೦.

ಯಜಮಾನ ಸಂಸ್ಕೃತಿಯ ಪ್ರತಿನಿಧಿ ಎನ್ನುವ ಆಪಾದನೆಗೆ ಕುವೆಂಪು ಅವರ ಎರಡು ಕಾದಂಬರಿಗಳು ತಕ್ಕ ಉತ್ತರವನ್ನು ನೀಡುತ್ತವೆ. ಸಂಸ್ಕೃತಿಯ ಬಗೆಗಿನ ತೀವ್ರವಾದ ರೊಚ್ಚನ್ನು ಅವರ ಕಾದಂಬರಿಗಳಲ್ಲಿ ಕಾಣಬಹುದು. ಪುರೋಹಿತಶಾಹಿಯ ಎಲ್ಲಾ ಮುಖವಾಡಗಳನ್ನು ಒಂದೊಂದಾಗಿ ಕಳಚಿತೋರಿಸುತ್ತಾರೆ. ಗೊಡ್ಡು ಬ್ರಾಹ್ಮಣ್ಯದ ಅರ್ಥಹೀನ ನಡವಳಿಕೆಗಳು ಕುಲಗೆಟ್ಟ ನಡತೆಗಳು ಕಾದಂಬರಿಗಳಲ್ಲಿ ಬಿಚ್ಚಿಕೊಳ್ಳುತ್ತವೆ. ಬೌದ್ಧ ಧರ್ಮದ ಪ್ರಭಾವದಿಂದ ಪ್ರೇರಿತನಾಗಿ ಸೃಷ್ಟಿಸಿರುವ ಕಥಾನಾಯಕ ಹೂವಯ್ಯ ಯಜಮಾನ ಸಂಸ್ಕೃತಿಯ ಎಲ್ಲಾ ಡಂಬಾಚಾರಗಳು ಎಕ್ಸ್‌ಪೋಸ್ ಆಗುವುದಕ್ಕೆ ಕಾರಣೀಭೂತನಾಗುತ್ತಾನೆ; ಶೂದ್ರ ಬದುಕಿನ ಸಾಂಸ್ಕೃತಿಕ ವಿವರಗಳ ಸಾಂದ್ರತೆಯನ್ನು ಸಮರ್ಥವಾಗಿ ಅಭಿವ್ಯಕ್ತಿಸಿದ್ದಾನೆ.

ಕನ್ನಡ ಸಾಹಿತ್ಯದ ಇತಿಹಾಸದಲ್ಲಿ ಜಾತಿ ಪದ್ಧತಿಯನ್ನು ವಿರೋಧಿಸಿ 'ಮನುಷ್ಯ ಜಾತಿ ತಾನೊಂದೆ ವಲಂ' ಎಂದು ಘೋಷಿಸಿದ ಪಂಪ ವರ್ಣಗೋಪುರದ ತುತ್ತ ತುದಿಯವನು. ಆಧುನಿಕ ಸಂದರ್ಭದಲ್ಲಿ ಜಾತಿ ಪದ್ಧತಿಯನ್ನು ವಿರೋಧಿಸಿ ನಿಷ್ಠುರ ಅಭಿಪ್ರಾಯಗಳಿಂದ ವೈದಿಕ ಮನೋಭಾವವನ್ನು ವಿರೋಧಿಸಿದ ಕುವೆಂಪು ವರ್ಣಗೋಪುರದ ಅತ್ಯಂತ ಕೆಳಗಿನ ಶ್ರೇಣಿಯ ಮೊತ್ತ ಮೊದಲ ಶೂದ್ರಲೇಖಕ. ಹೀಗಾಗಿ ಪಂಪನ ಘೋಷಣೆಗಿಂತ ಹೆಚ್ಚು ತೀವ್ರತೆ ನಿನ್ನೆ ಮೊನ್ನೆಯವರೆಗೂ ಜ್ಞಾನದಿಂದ ವಂಚಿತನಾಗಿದ್ದ ಶೂದ್ರ ಲೇಖಕನ ಬರವಣಿಗೆಯಲ್ಲಿದೆ ಎಂಬುದು ಇಲ್ಲಿ ಗಮನಾರ್ಹವಾದುದು.

ಶೋಷಕ ನೆಲೆಯಿಂದ ಬಂದ ಪಂಪ ಜಾತಿ ಪದ್ಧತಿಯನ್ನು ಮೇರುಸ್ತರದಲ್ಲಷ್ಟೇ ವಿರೋಧಿಸುತ್ತಾನೆ. ಆದರೆ ಶೋಷಿತನೆಲೆಯಿಂದ ಬಂದ ಕುವೆಂಪು ಜಾತಿ ಪದ್ಧತಿಯ ಅವೈಚಾರಿಕತೆಯನ್ನು ತಮ್ಮ ಬದುಕಿನ ಒಂದು ಸವಾಲನ್ನಾಗಿ ಸ್ವೀಕರಿಸಿ ಇಡಿಯಾಗಿ ವಿರೋಧಿಸುತ್ತಾರೆಂಬುದೆ ಮುಖ್ಯ. ವಿದ್ಯೆಯನ್ನು ಸ್ವಂತ ಸ್ವತ್ತನ್ನಾಗಿಸಿಕೊಂಡು ಶೂದ್ರರಿಗೆ ದಕ್ಕಲು ಬಿಡದೆ ಸದಾ ಭೀತಿಯ ನೆರಳಲ್ಲಿಟ್ಟು ಉದ್ದಕ್ಕೂ ಶೋಷಿಸುತ್ತಲೇ ಬಂದ ಜನರನ್ನು ವಿದ್ಯೆಯ ಅದಮ್ಯ ಹಂಬಲದಿಂದ ಅಕ್ಷರ ಕಲಿತು ಅದನ್ನೇ ಅಭಿವ್ಯಕ್ತಿ ಸ್ವರೂಪವನ್ನಾಗಿಸಿಕೊಂಡು ಶೋಷಿಸುವವರ ವಿರುದ್ಧ ಪ್ರತಿಭಟನೆಯ ದನಿ ಎತ್ತಿದ ಹಿರಿಮೆ ಕುವೆಂಪು ಅವರದು. ಈ ಕಾರಣದಿಂದ ಜಾತಿ ಪದ್ಧತಿಯ ಬಗೆಗಿನ ಅವರ ಹೋರಾಟ ಹೆಚ್ಚು ಅರ್ಥಪೂರ್ಣವಾದುದು.

'ಜಲಗಾರ' ಮತ್ತು 'ಶೂದ್ರತಪಸ್ವಿ' ನಾಟಕಗಳು ಜಾತಿಪದ್ಧತಿಯ ವಿರುದ್ಧ ಎತ್ತಿದ ಗದಾಪ್ರಹಾರಗಳಾಗಿವೆ. ವರ್ಣಾಶ್ರಮ ಧರ್ಮವನ್ನು ಪೋಷಿಸಿಕೊಂಡು ಬರುತ್ತಾ

ಅವರ ನೆರಳಿನಲ್ಲಿ ಮುಗ್ಧ ಜನರನ್ನು ಶೋಷಣೆ ಮಾಡುತ್ತಾ ಬದುಕುತ್ತಿದ್ದ ಜನಗಳ ಕುಸಂಸ್ಕೃತಿ ಅಮಾನವೀಯ ಮನೋಭಾವವನ್ನು ಈ ಎರಡು ನಾಟಕಗಳಲ್ಲಿ ತೀಕ್ಷ್ಣವಾಗಿ ಟೀಕಿಸಲಾಗಿದೆ. "ಕುವೆಂಪು ವೈಜ್ಞಾನಿಕ ಸಮಾಜವಾದದ ತಳಹದಿಯ ಮೇಲೆ ತಮ್ಮ ವರ್ಗಸ್ವರೂಪ ಧೋರಣೆಗಳನ್ನು ಬೆಳೆಯಿಸಿಕೊಂಡವರು. 'ಸರ್ವರಿಗೆ ಸಮಪಾಲು, ಸರ್ವರಿಗೆ ಸಮಬಾಳು' ಎನ್ನುವುದು ಅವರ ಬದುಕಿನ ಧ್ಯೇಯ. ಆರ್ಥಿಕ ಅಸಮಾನ ಹಂಚಿಕೆ ಸಲ್ಲದು. ಇದ್ದುದ್ದನ್ನು ಎಲ್ಲರೂ ಹಂಚಿ ತಿನ್ನಬೇಕು. ಕಣ್ಣೆದುರು ನರಳುತ್ತಿರುವ ರೋಗಗ್ರಸ್ಥ ಸಮಾಜವನ್ನು ಸಮೂಲ ನಾಶಗೊಳಿಸಿ ಬಡವರ ಶೋಷಣೆಯನ್ನು ನಿವಾರಿಸಬೇಕು. ಆರ್ಥಿಕ ಅಸಮಾನತೆಗೆ ವರ್ಗದ ಇರುವಿಕೆಯಲ್ಲಿ ಕಾರಣವನ್ನು ಹುಡುಕುವ ಕವಿ ಕುವೆಂಪು"[೧]

ವರ್ಗ ಸಂಘರ್ಷ ಇಂದು ನಿನ್ನೆಯದಲ್ಲ. ಶತಮಾನಗಳಿಂದಲೂ ಇದು ನಡೆದುಕೊಂಡೇ ಬಂದಿದೆ. ಸಾಮ್ರಾಜ್ಯಶಾಹಿಯ ವಿರುದ್ಧ ಸಾಮಾನ್ಯನ್ನೊಬ್ಬ ದಂಗೆ ಎದ್ದರೆ ಅದನ್ನು ಹತ್ತಿಕ್ಕುವುದು ಸಾಮ್ರಾಜ್ಯಶಾಹಿಯ ಸಾಮಾನ್ಯ ಲಕ್ಷಣ. ಜಾಣತನ ಶಕ್ತಿ ಎಲ್ಲವು ಉಳ್ಳವರ ಸ್ವತ್ತು. ಸಾಮಾನ್ಯ ಅದನ್ನು ಹೊಂದಲು ಸಾಧ್ಯವೇ ಇಲ್ಲ. ಹಾಗೊಂದು ವೇಳೆ ಅದನ್ನು ಹೊಂದಿದಲ್ಲಿ ಯಾವ ರೂಪದಲ್ಲಾದರೂ ಸರಿಯೇ ಅದನ್ನು ಇಲ್ಲವಾಗಿಸುವುದು ಉಳ್ಳವರ ಲಕ್ಷಣ. ಉಳ್ಳವರ ಬಿಂಕದ ಹಮ್ಮಿನ ಎದುರು ಇಲ್ಲದವರ ಪ್ರತಿನಿಧಿಯಾಗಿ ಏಕಲವ್ಯ ಪ್ರಬಲಶಕ್ತಿಯಾಗಿ ಮೆರೆಯುತ್ತಾನೆ. ಆದರೆ ಅಂಥ ಪ್ರಬಲಶಕ್ತಿಯನ್ನು ಇಲ್ಲವಾಗಿಸಲು ಆಳರಸ–ಪುರೋಹಿತಶಾಹಿ ಎರಡೂ ಒಟ್ಟಾಗಿ ಸೇರುತ್ತವೆ. ಪರಿಣಾಮ ದುರಂತ. ಸಾಮ್ರಾಜ್ಯದ ತೃಷೆಗೆ ಏಕಲವ್ಯ ಸಾಮಾಜಿಕ ಬಲಿಯಾಗುತ್ತಾನೆ. 'ಬೆರಳ್‌ಗೆ ಕೊರಳ್' ನಾಟಕ ಪರಿಣಾಮಕಾರಿಯಾಗಿ ಚಿತ್ರಿಸುತ್ತದೆ.

ಜೀತಪದ್ಧತಿ ವರ್ಗಹಿಂಸೆಯ ಹೃದಯ ವಿದ್ರಾವಕ ಸಂಗತಿ. ಊಳಿಗಮಾನ್ಯ ವ್ಯವಸ್ಥೆಯೊಳಗೆ ಅಶಾಂತಿ, ಮೌನ ಸಂಘರ್ಷದ ಜ್ವಾಲಾಮುಖಿಗಳು ಒಳಗೊಳಗೇ ಕುದ್ದು ಆವಿಯಾಗಿ ಬಿಡುತ್ತವೆ. 'ಸಾಲದ ಮಗು' ಕತೆಯಲ್ಲಿ ಇಂಥದೊಂದು ಸ್ವರೂಪವನ್ನು ಗುರುತಿಸಲು ಸಾಧ್ಯ. ಜಗತ್ತು ಎಂದರೇನೆಂಬುದನ್ನೇ ಅರಿಯದ ಎಂಟು, ಹತ್ತು ವರ್ಷದ ಕೂಸು ಸುಬ್ಬ ಗೌಡನ ಜೀತದ ಗಾಣಕ್ಕೆ ಹಗಲು ರಾತ್ರಿ ವಿಶ್ರಾಂತಿ ಇಲ್ಲದೆ ದುಡಿದು ದಿನ ತಳ್ಳುತ್ತಿದ್ದ. ಮಲೆನಾಡಿನ ಕಾರ್ಗಾಲದ ಜಡಿಮಳೆಯಲ್ಲಿ ಗದ್ದೆಗೆ ಹಾಕಿದ್ದ ಕೂಳಿಯನ್ನು ನೋಡಲು ಹೋಗಿ ಹಾವಿನಿಂದ ಕಡಿಸಿಕೊಂಡು ಸಾಯುತ್ತಾನೆ.

---

೧. ಚಕ್ಕೆರೆ ಶಿವಶಂಕರ್ (ಸಂ)– ಸಹ್ಯಾದ್ರಿಯ ಸೂರ್ಯ ಪ್ರಸ್ತಾವನೆ, ಬದುಕು ಕಲಿಸದ ಲೋಕಗುರು xxiii ಎರಡನೇ ಮುದ್ರಣ, ೨೦೧೦.

ವರ್ಗಸಂಘರ್ಷಕ್ಕೆ ಮೇಲುವರ್ಗದವರ ಶೋಷಣೆಗೆ 'ಧನ್ವಂತರಿಯ ಚಿಕಿತ್ಸೆ' ಕಥೆ ಅತ್ಯುತ್ತಮ ಉದಾಹರಣೆಯಾಗಿದೆ. ಬಂಡವಾಳ ಶಾಹಿಗಳು ಕೆಳವರ್ಗದ ಜನತೆಯನ್ನು ಶೋಷಿಸುತ್ತಿರುವುದು ಹಿಂದಿನಿಂದಲೂ ನಡೆದು ಬಂದದ್ದೇ. ಆದರೂ ಒಂದು ದಿನ ಮಲೆನಾಡಿನ ಮೂಲೆಯ ಕೊಂಪೆಯ ಗುಡಿಸಿಲಿನಿಂದ ಮೇಲಿನ ಕೂಗು ಆರ್ತನಾದವಾಗಿ ಹೊರಬೀಳುತ್ತದೆ. ಈ ಗೋಳು ಭೂಲೋಕವನ್ನು ದಾಟಿ ಸ್ವರ್ಗಲೋಕವನ್ನು ಮುಟ್ಟಿ ವಿಶ್ವಾಮಿತ್ರ, ಪರಶುರಾಮರನ್ನು ಭೂಲೋಕಕ್ಕೆ ಕರೆತರುತ್ತದೆ. ಸಾಮ್ರಾಜ್ಯಶಾಹಿಯನ್ನು ವಿರೋಧಿಸಿ ಸರ್ವಸಮತ್ವಕ್ಕಾಗಿ ಹೋರಾಡಿದ ಈ ಮುನಿಗಳು ಗೋಳಿನ ಮೂಲವನ್ನು ಹುಡುಕಿ ಮಲೆನಾಡಿನ ಕೊಂಪೆಗೆ ಬರುತ್ತಾರೆ. ರೈತನೊಬ್ಬ ಕೃಶ ಶರೀರನಾಗಿ ರೋಗದಿಂದ ನರಳುತ್ತಿದ್ದಾನೆ. ಅವರ ಗುಡಿಸಲು ದಾರಿದ್ರ್ಯ, ರೋಗ, ಕಷ್ಟಗಳ ತವರೂರು. ಇರ್ವರೂ ನೋಡುತ್ತಾರೆ, ಇದೇ ಜಗತ್ತು ಬಡರೈತನ ಎದೆಯ ಮೇಲಿನ ಬಂಡೆಯಾಗಿದೆ. ಆ ಭಾಗವನ್ನು ಸಹಿಸಲಾರದೆ ರೈತ ಗೋಳಿಡುತ್ತಿದ್ದಾನೆ. ಮುನಿಗಳು ತಮಗೆ ತೋಚಿದ್ದೆಲ್ಲವನ್ನು ಮಾಡುತ್ತಾರೆ. ಅಧಿಕಾರಿ, ವೈದ್ಯ, ಪುರೋಹಿತ ಎಲ್ಲರನ್ನು ಕರೆತರುತ್ತಾರೆ. ಆದರೆ ಅವರೇ ರೈತನ ಶೋಷಕ ಶಕ್ತಿಗಳು ಎಂಬುದನ್ನು ಕಾಣರು. ಆ ಮೂವರು ಬಂದಾಗ ರೈತನ ಕೂಗು ಇನ್ನೂ ತಾರಕಕ್ಕೇರುತ್ತದೆ. ಕಡೆಗೆ ದೇವಲೋಕದ ಧನ್ವಂತರಿಗಳು ಬರುತ್ತಾರೆ. ರೈತ ಮೇಲೆದ್ದರೆ ಎಲ್ಲವೂ ಸರಿಹೋಗುತ್ತದೆಂದು ತಿಳಿಸುತ್ತಾರೆ. ಆವನನ್ನು ಅದುಮಿ ಹಿಡಿದಿರುವ ಶೋಷಕ ಶಕ್ತಿಗಳೇ ಈ ರೋಗದ ಮೂಲ ಎಂದರಿತ ಅವರು ರೈತನ ಎದೆಯ ಮೇಲಿನ ಭಾರವನ್ನು ಕೆಳಕ್ಕೆ ನೂಕುತ್ತಾರೆ. ಭೂಮಿ ನಡುಗಿ ವಿಶಾಲ ಮಹಲುಗಳು ಎತ್ತರದ ಸೌಧಗಳು ಭಗ್ನವಾಗಿ ಕೆಳಗುರುಳುತ್ತವೆ. ರೈತ ಮೇಲೆದ್ದು ನಿರಾಳವಾಗಿ ಉಸಿರಾಡುತ್ತಾನೆ. ಶೋಷಣೆಯ ಅಭಿವ್ಯಕ್ತಿ ಇಲ್ಲಿದೆ. "ಪಟ್ಟಭದ್ರ ಹಿತಾಶಕ್ತಿಗಳ ಶೋಷಣೆಗೆ, ಅಧಿಕಾರದ ಅಹಮಿಕೆಗೆ ಕುಗ್ಗಿ ಬಗ್ಗಿ ಬೆನ್ನನ್ನು ಮೇಲೆತ್ತಲು ಸಾಧ್ಯವೇ ಇಲ್ಲದಂತಹ ದೀನ ಪರಿಸ್ಥಿತಿಯಲ್ಲಿ ತೊಳಲಾಡುತ್ತಿದ್ದ ದೀನದಲಿತರ ಬದುಕಿಗೂ ಸಹ ತನ್ನದೇ ಆದ ಆತ್ಮಾಭಿಮಾನವಿದೆ, ಸ್ವಾಭಿಮಾನ ಪ್ರವೃತ್ತಿ ಇದೆ ಎನ್ನುವುದನ್ನು ಮೊತ್ತಮೊದಲಿಗೆ ತೋರಿಸಿ ಕೊಟ್ಟ ಶೂದ್ರ ಬರಹಗಾರ ಕುವೆಂಪು. ಜೀವನದ ತೀವ್ರ ತುಡಿತ ಹಾಗೂ ಬದುಕಿನ ನಿರಂತರ ಆಶಾವಾದವನ್ನು ನಂಬಿ ಸರ್ವನಾಶದಲ್ಲಿಯೂ ಸಹ ಸದಾ ಒಳ್ಳೆಯದನ್ನೇ ಹಾರೈಸುವ ಕುವೆಂಪು ವಿಶ್ವಮಾನವ ತತ್ವ ಜೀವನ ಪ್ರೀತಿಯ ಚೋತೋಹಾರಿ ಪ್ರಕೃತಿಯ ನೆಲೆಯಿಂದ ಮೂಡಿಬಂದದ್ದು."[೧] ಕುವೆಂಪು ಅವರಿಗೆ

---

೧. ಚಕ್ಕೆರೆ ಶಿವಶಂಕರ್ ಪ್ರಸ್ತಾವನೆ, ಬದುಕು ಕಲಿಸದ ಲೋಕುರು xxxi ಸಾಹಿತ್ಯ ಪರಿಷತ್ತು ಬೆಲ. ಮುದ್ರಣ, ೨೦೧೦.

ಕಾಡು, ಪ್ರಕೃತಿ, ಬದುಕು ಎಲ್ಲವೂ ಒಂದೆ. ಕಾಡ ಮೂಲಕವೇ ಪಥ ಆಗಸಕೆ ಎನ್ನುವ ಶ್ರದ್ಧೆ ಮನುಷ್ಯನಲ್ಲಿ ವಿಶ್ವಪ್ರೀತಿಯನ್ನು ಬೆಳೆಸುತ್ತದೆ. ಅಪಮಾನತೆಯನ್ನು ತೊಲಗಿಸುತ್ತದೆ. ಸಮಾನತೆಯ ನೆರಳಿನಲ್ಲಿ ಪ್ರತಿಯೊಬ್ಬರೂ ಸುಖವಾಗಿ ಬದುಕಲು ಹಾದಿ ಮಾಡಿ ಕೊಡುತ್ತದೆ.

ಕಾರಂತರ 'ಜೋಮನಕದುಡಿ', 'ಕುಡಿಯರ ಕೂಸು', ದಲಿತ-ಬಂಡಾಯದ ಧೋರಣೆಯನ್ನು ಪ್ರತಿಬಿಂಬಸುವ ಕೃತಿಗಳಾಗಿವೆ. ಪ್ರಗತಿಶೀಲ ಸಾಹತ್ಯದ ಪ್ರಮುಖ ಕಾದಂಬರಿಕಾರರಲ್ಲಿ ಬಸವರಾಜ ಕಟ್ಟಿಮನಿ ಮತ್ತು ನಿರಂಜನ ಮುಖ್ಯರಾಗುತ್ತಾರೆ. ಬಂಡಾಯವೇ ಅವರ ಮನೋವೃತ್ತಿಯಾಗಿತ್ತು. ನವ್ಯದವರು ಹೆಚ್ಚಾಗಿ ಪಾಶ್ಚಾತ್ಯ ಕವಿಗಳಾದ ಕಾಪು, ಕಾಮು, ಬೆಕೆಬ್ ಮುಂತಾದವರಿಗೆ ಮೊರೆ ಹೋದುದರಿಂದ ಲೈಂಗಿಕತೆಗೆ ಮನುಷ್ಯನ ವೈಯಕ್ತಿಕ ವಿಷಯಕ್ಕೆ ಹೆಚ್ಚು ಆಧ್ಯತೆಯನ್ನು ಕೊಟ್ಟಿರವುದರಿಂದ ಅವರಲ್ಲಿ ಬಂಡಾಯದ ಕಿಡಿ ಕಡಿಮೆಯೆಂದೇ ಹೇಳಬಹುದು.

ಚಂದ್ರಶೇಖರ ಪಾಟೀಲರು ದಲಿತ-ಬಂಡಾಯದ ಪ್ರಾರಂಭಿಕ ನೆಲೆಯನ್ನು ಗುರುತಿಸುವುದು ಹೀಗೆ "ಎಪ್ಪತ್ತರ ದಶಕದಲ್ಲಿ ಕರ್ನಾಟಕದಲ್ಲಿ ಪ್ರಾರಂಭಗೊಂಡ ದಲಿತ ಸಂಘಟನೆ, ಶೂದ್ರ ಶಕ್ತಿಯ ಪ್ರಾದುರ್ಭಾವ, ವಿಚಾರವಾದಿ ಆಂದೋಲನಗಳೆಲ್ಲ ಬಂಡಾಯ ಸಾಹಿತ್ಯದ ಮೂಲ ಪ್ರೇರಣೆಗಳು. ಆನಂತರದ ತುರ್ತು ಪರಿಸ್ಥಿತಿ (೧೯೭೫) ಈ ಬಗೆಯ ಸಾಹಿತ್ಯಕ್ಕೆ ಮೊನಚುಕೊಟ್ಟಿತು. ಇವೆಲ್ಲದರ ಒಟ್ಟು ಪರಿಣಾಮವಾಗಿ ೧೯೭೯ರಲ್ಲಿ ಎಲ್ಲ ಎಡ ಮತ್ತು ಪ್ರಜಾಪ್ರಭುತ್ವವಾದಿ ಶಕ್ತಿಗಳು ಮುಖ್ಯವಾಗಿ ಮಾರ್ಕ್ಸ್, ಲೋಹಿಯ ಹಾಗೂ ಅಂಬೇಡ್ಕರ್ ಅವರ ವಿಚಾರಧಾರೆಯ ಚೌಕಟ್ಟಿನಲ್ಲಿ ಒಂದು ಸಾಮಾನ್ಯ ವೇದಿಕೆಯಾಗಿ 'ಕರ್ನಾಟಕ ಬಂಡಾಯ ಸಾಹಿತ್ಯ ಸಂಘಟನೆ'ಯನ್ನು ಸ್ಥಾಪಿಸಿದವು. ಈ ಒಂದು ದಶಕದ ಅವಧಿಯಲ್ಲಿ (೧೯೭೯-೧೯೮೯) ಈ ಸಂಘಟನೆಯಿಂದಾಗಿ ಕನ್ನಡನಾಡಿನ ಸಾಂಸ್ಕೃತಿಕ, ಸಾಮಾಜಿಕ ಹಾಗೂ ಸಾಹಿತ್ಯಿಕ ಲೋಕಗಳ ಮೇಲೆ ಗಾಢವಾದ ಪ್ರಭಾವ ಬೀರಿದೆ. ಎಲ್ಲಾ ಪ್ರಗತಿಪರರು ಒಟ್ಟಾಗಿ ಹೋರಾಟ ಮಾಡುವುದು ಸಾಧ್ಯವೆಂದು ಬಂಡಾಯ ಸಂಘಟನೆ ತೋರಿಸಿಕೊಟ್ಟಿದೆ."[೧] ಬಂಡಾಯ ಸಾಹಿತ್ಯದ ಹೋರಾಟ ಪ್ರಧಾನವಾಗಿ ಸಾಂಸ್ಕೃತಿಕ ಕ್ಷೇತ್ರಕ್ಕೆ ಸಂಬಂಧಿಸಿದ್ದು. "ಅಸ್ಪೃಶ್ಯತೆ, ಜಾತಿಪದ್ಧತಿ, ಲಿಂಗಭೇದ ಮತ್ತು ವರ್ಣಭೇದ ನೀತಿಯ ವಿರುದ್ಧ ಹೋರಾಟವನ್ನು ಮಾಡುವುದು ನಮ್ಮ ಮುಖ್ಯ ಉದ್ದೇಶಗಳಲ್ಲಿ ಒಂದು. ಬಂಡಾಯ ಸಾಹಿತ್ಯ ಚರಿತ್ರೆಯ ಅನಿವಾರ್ಯತೆಯಿಂದ ಹುಟ್ಟಿದ

೧. ಪಾಟೀಲ ಚಂದ್ರಶೇಖರ ಬಂಡಾಯ ಸಾಹಿತ್ಯ ಕುರಿತು. ಪು. ೯೧, ಸಂಕ್ರಮಣ, ೧೯೮೯.

ಸೃಜನಶೀಲಕ್ರಿಯೆ. ವ್ಯವಸ್ಥೆಯ ಸರ್ವಸೂತ್ರಗಳ ವಿರುದ್ಧ ಬಂಡೆದ್ದ ಮನೋಧರ್ಮವೇ ಬಂಡಾಯ ಸಾಹಿತ್ಯ ಚಳುವಳಿಯ ಮೂಲಸೆಲೆ"[೧] ಎಂಬುದು ಬರಗೂರು ರಾಮಚಂದ್ರಪ್ಪನವರ ನಿಲುವಾಗಿದೆ.

ಬಂಡಾಯ ಸಾಹಿತ್ಯ ಚಳುವಳಿಯನ್ನು ಕುರಿತು ಶಿವರಾಮ ಕಾಡನ ಕುಪ್ಪೆಯವರು

"ಖಡ್ಗವಾಗಲಿ ಕಾವ್ಯ ಜನರ ನೋವಿಗೆ ಮಿಡಿಯುವ ಪ್ರಾಣಮಿತ್ರ" ಎಂಬ ಘೋಷಣೆಯ ಮೂಲಕ ಬಂಡಾಯ ಸಾಹಿತ್ಯ ವಾಸ್ತವವಾಗಿ ತಲತಲಾಂತರ ವರ್ಷಗಳಿಂದ ಅದುಮಿಟ್ಟಿದ್ದ ಅಭಿವ್ಯಕ್ತಿಯ ಒಂದು ರೂಪು"[೨] ಎಂದು ಹೇಳಿದ್ದಾರೆ. ಬಂಡಾಯ ಸಾಹಿತ್ಯ ಚಳುವಳಿಯ ಮಂಚೂಣಿಯಲ್ಲಿ ಪ್ರಮುಖವೆನಿಸುವ ಹಲವಾರು ಲೇಖಕರನ್ನು ಹೆಸರಿಸಬಹುದಾಗಿದೆ. ಉದಾಹರಣೆಗೆ ಚಂದ್ರಶೇಖರ ಪಾಟೀಲ, ಬರಗೂರು ರಾಮಚಂದ್ರಪ್ಪ, ಕುಂ.ವೀರಭದ್ರಪ್ಪ, ಚನ್ನಣ್ಣ ವಾಲೀಕಾರ, ಕಾಳೇಗೌಡ ನಾಗವಾರ, ಬಿ.ಟಿ.ಲಲಿತನಾಯಕ್, ರಂಜಾನ್‌ದರ್ಗಾ, ದೇವನೂರು ಮಹಾದೇವ, ಸಿದ್ದಲಿಂಗಯ್ಯ, ಮ.ನ.ಜವರಯ್ಯ, ಅರವಿಂದಮಾಲಗತ್ತಿ ಇನ್ನೂ ಮುಂತಾದವರು ಸೃಜನಶೀಲ ಲೇಖಕರಾಗಿ ಒಂದು ಕಡೆಗಿದ್ದರೆ, ಶಿವರಾಮ ಕಾಡನಕುಪ್ಪೆ, ದೇವಯ್ಯ ಹರವೆ, ಡಾ. ಆರ್ಕೆ ಮಣಿಪಾಲ, ದಿ. ಡಿ.ಆರ್. ನಾಗರಾಜ ಮುಂತಾದವರು ಅದೇ ತಾತ್ವಿಕ ದೃಷ್ಟಿಧೋರಣೆಯುಳ್ಳ ವಿಮರ್ಶಕರಾಗಿದ್ದಾರೆ.

---

೧. ಬರಗೂರು ರಾಮಚಂದ್ರಪ್ಪ, 'ಬಂಡಾಯ ಸಾಹಿತ್ಯ ಚಳುವಳಿ' ಪು. ೧೩, ಪಂಚಮ ಪ್ರಕಾಶನ, ಬೆಂಗಳೂರು, ೧೯೮೩.

೨. ಶಿವರಾಮ ಕಾಡನಕುಪ್ಪೆ, ಬಂಡಾಯ ಸಾಹಿತ್ಯ ಚಳುವಳಿ, ಪು. ೧, ಬಂಡಾಯ ಹತ್ತು ವರ್ಷ, (ಸಂ) ಆರ್.ಜಿ.ಹಳ್ಳಿನಾಗರಾಜ.

# ಅಧ್ಯಾಯ – ೨

# ಕುವೆಂಪು ಕಾದಂಬರಿಗಳ ಕಿರು ಪರಿಚಯ

**ಕಾನೂರು ಹೆಗ್ಗಡತಿ:** ಕುವೆಂಪುರವರ 'ಕಾನೂರು ಹೆಗ್ಗಡತಿ'ಯು ೧೯೩೬ರಲ್ಲಿ ಬಂದ ಕೃತಿ. ಇದು ಎರಡು ಮನೆತನಗಳ ದಾಯಾದಿ ಮತ್ಸರವನ್ನು ಒಳಗೊಂಡ ಕಥಾಹಂದರವಾಗಿದೆ. ಇದರ ಕಥಾವಸ್ತು ಸ್ವಾತಂತ್ರ್ಯ ನಂತರದ ಕಾಲವನ್ನ ಪ್ರತಿನಿಧಿಸುತ್ತದೆ. 'ಕಾನೂರು ಹೆಗ್ಗಡತಿ' ಕಥನ ತಂತ್ರವನ್ನು ಅವಲಂಬಿಸಿ ಬೆಳೆದು ಬಂದ ಕೃತಿಯಾಗಿದೆ. ಒಂದು ಕಾದಂಬರಿ ತನಗಿರುವ ಸ್ವಾತಂತ್ರ್ಯದ ಸಂಪೂರ್ಣ ಉಪಯೋಗವನ್ನು ಇಲ್ಲಿ ಪಡೆಯುತ್ತದೆ. ಇಲ್ಲಿಯ ಎಲ್ಲ ಪಾತ್ರಗಳು – ಚಂದ್ರಯ್ಯಗೌಡರಿಂದ ಹಿಡಿದು ಬಾಡುಗಳ್ಳ ಸೋಮನವರೆಗೆ – ಒಂದು ಉದ್ದೇಶಪೂರ್ತಿಗಾಗಿ ಕಡೆದು ತೆಗೆದ ಪಾತ್ರಗಳು. ಈ ಎಲ್ಲ ವ್ಯಕ್ತಿಗಳ 'ಮಾನಸಿಕತೆ' ಅವರವರ ವ್ಯಕ್ತಿತ್ವವನ್ನು ಸುರಕ್ಷಿತವಾಗಿಸುತ್ತದೆ. ಅದೇ ಅವರ 'ದೈವ'ವೂ ಆಗುತ್ತದೆ. ಚಂದ್ರಯ್ಯಗೌಡರು ಪಾರ್ಶ್ವವಾಯುವಿನಿಂದ ಸಾಯುತ್ತಾರೆ. ಸುಬ್ಬಮ್ಮನ ನೀತಿ ಭ್ರಷ್ಟತೆಯನ್ನು ಕಣ್ಣಾರೆ ಕಂಡ ರಾಮಯ್ಯ ಮನೆಯ ಮುಂದಿರುವ ಸಂಪಿಗೆ ಗಿಡವನ್ನು ಕಡಿಸಿ ಹಾಕುತ್ತಾನೆ. ಒಂದು ಮನೆತನದ ಅಭ್ಯುದಯದಂತೆ ಅದೆ ಅವನತಿಗೂ ಸಕಾರಣವಾದದ್ದು, ಒಂದು ದೃಷ್ಟಿಯಿಂದ ನ್ಯಾಯವಾದದ್ದು.

'ಕಾನೂರು ಹೆಗ್ಗಡತಿ'ಯ ಪಾತ್ರಗಳು ದೈವವನ್ನು ನಂಬುತ್ತವೆ. ಆದರೆ ಆ ನಂಬಿಕೆ ಎಷ್ಟು ರೂಢಿಗತವಾದದ್ದೆಂದರೆ ಅದು ನಂಬಿಕೆಯೇ ಅಲ್ಲ. ಆದ್ದರಿಂದ ಈ ನಂಬಿಕೆಯನ್ನು ಅದಕ್ಕಿಂತ ದೊಡ್ಡದಾಗಿರುವ ಇನ್ನೊಂದು ಶ್ರೇಷ್ಠ ಪ್ರಜ್ಞೆ ಅಲ್ಲಗಳೆಯುತ್ತದೆ. ಮದುವೆಯಾದ ಮೇಲೆ ಸೀತೆ ಗಂಡನಾದ ರಾಮಯ್ಯನೊಡನೆ ಸಹಕರಿಸುವುದಿಲ್ಲ. ರಾಮಯ್ಯ ಮತ್ತು ಚಂದ್ರಯ್ಯಗೌಡರು ಕೂಡಿಕೊಂಡು ಅವಳಿಗೆ ದೆಯ್ಯ ಬಡಿದಿದೆಯೆಂದು ತೀರ್ಮಾನಿಸಿ ಅವಳ ತೋಳಿಗೆ ಬರೆ ಹಾಕುತ್ತಾರೆ. ಅವರ ಮನಃಸ್ಥಿತಿಯ ನಿಜ ದರ್ಶನದ ಬೆಳಕಿನಲ್ಲಿ ಅವರಿಗೆ ದೆವ್ವದಲ್ಲಿ ನಂಬಿಕೆಯಿಲ್ಲವೆಂಬುದು ಕೂಡಲೇ ಗೊತ್ತಾಗುತ್ತದೆ. ಪ್ರೀತಿಯ ಇನ್ನೊಂದು ವಿಕೃತ ರೂಪವಾದ ಹಿಂಸೆ ಅವರ ಮನಸ್ಸಿನಲ್ಲಿ ಮನೆಮಾಡಿದೆಯೆಂದು ಯಾರೂ ಹೇಳಬಹುದಾಗಿದೆ. ಕಣ್ಣಿಗೆ ಕಾಣದ ದೆವ್ವವನ್ನು ಆಹ್ವಾನಿಸಿ ದುರ್ಬಲರಿಗೆ ಶಿಕ್ಷೆ ನೀಡುವ ಒಂದು ಉಪಾಯ ಇದಾಗಿದೆ. ಕಾನೂರು ಚಂದ್ರಯ್ಯಗೌಡರ ದರ್ಪದ ಮನೆತನದಲ್ಲಿ ಸುಬ್ಬಮ್ಮ ರಂಗಪ್ಪ ಸೆಟ್ಟರ ಕಳ್ಳ ವ್ಯವಹಾರ ಅಬಾಧಿತವಾಗಿ ಸಾಗುತ್ತಿದ್ದರೆ ಸೀತೆ ಮತ್ತು ಹೂವಯ್ಯರ ನಿರ್ಮಲವಾದ ಸ್ನೇಹ ಸಂಬಂಧ ಅಡಿಕೆಯ ಮಾತಾಗುತ್ತದೆ. ಈ ಕಾದಂಬರಿಯ ಪ್ರತಿಯೊಂದು

ಪಾತ್ರದಲ್ಲಿ ಮುಖ್ಯವಾಗಿ ಕಾಣುವುದೆಂದರೆ ಆಯಾ ಪಾತ್ರಗಳ ಸಂವೇದನೆ ಮತ್ತು ಬುದ್ಧಿವಂತಿಕೆಯ ಪರಿಮಿತ. ಆಧುನಿಕ ಶಿಕ್ಷಣದ ಫಲವಾಗಿ ನಮ್ಮ ಬುದ್ಧಿ ಮತ್ತು ಸಂವೇದನೆಗಳು ವಿಸ್ತಾರವಾಗಿ ಪ್ರವಹಿಸುವಂತಾದರೆ ಮಾತ್ರ ನಾಡಿನ ಪುನರುಜ್ಜೀವನ ಸಾಧ್ಯವಾಗುತ್ತದೆಂಬ ನಂಬಿಕೆ ಇಲ್ಲಿದೆ.

'ಕಾನೂರು ಹೆಗ್ಗಡಿತಿ'ಯ ಕೇಂದ್ರ ಪಾತ್ರ ಹೂವಯ್ಯ. ವೈಚಾರಿಕ ನೆಲೆಯಲ್ಲಿ ಬೆಳೆದು ಬಂದ ಆತ ಮೂಢನಂಬಿಕೆ, ಸಂಪ್ರದಾಯಗಳನ್ನು ಅಲ್ಲಗಳೆಯುತ್ತಾನೆ. ವೆಂಕಪ್ಪ ಜೋಯಿಸರು ಹೂವಯ್ಯನನ್ನು ಕಂಡರೆ ಕಿಡಿಕಾರುತ್ತಾರೆ. ಅವರ ಅಭಿಪ್ರಾಯದಲ್ಲಿ ಹೂವಯ್ಯನಿಂದಲೆ ಇಲ್ಲಿಯ ಆಚಾರ, ಸಂಸ್ಕೃತಿಗಳೆಲ್ಲ ಹಾಳಾಗುತ್ತಿರುವುದು ಎಂಬುದಾಗಿದೆ. ಬಂಡಾಯದ ಅಂಶವನ್ನು ದಟ್ಟವಾಗಿಟ್ಟುಕೊಂಡ ಕಾದಂಬರಿ 'ಕಾನೂರು ಹೆಗ್ಗಡತಿ'.

## ಮಲೆಗಳಲ್ಲಿ ಮದುಮಗಳು

ಕುವೆಂಪುರವರು ಈ ಕೃತಿಯನ್ನು ೧೯೬೭ರಲ್ಲಿ ರಚಿಸಿದ್ದಾರೆ. ಇದರ ಕಾಲ ಸ್ವತಂತ್ರಪೂರ್ವದ್ದಾಗಿದ್ದು ಸುಮಾರು ಎಪ್ಪತ್ತು ವರ್ಷಗಳ ಅಂತರವಿದೆ.

'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ಮಾನವ ಪ್ರವೃತ್ತಿಗಳ ಸಹಜ ಅಭಿವ್ಯಕ್ತಿಯನ್ನು ಕಾಣಬಹುದು. ಜೀವನವನ್ನು ಯಥಾವತ್ತಾಗಿ ನೋಡುವ, ಅನುಭವಿಸುವ ಮತ್ತು ಕಲೆಯಾಗಿ ರೂಪಿಸುವ ಪ್ರಾಮಾಣಿಕ ಪ್ರಯತ್ನದ ಫಲ ಈ ಕಾದಂಬರಿ. ಇಲ್ಲಿ ಬರುವ ಪಾತ್ರಗಳು ಪ್ರಕಟಿಸುವ ಸತ್ಯ ಅತ್ಯಂತ ನಿಷ್ಠುರವಾದದ್ದು. ಸಂಕೀರ್ಣ ಹಾಗೆಯೇ ಪ್ರಬಲ ಪ್ರವೃತ್ತಿಯಾದ ಕಾಮದ ಬಗ್ಗೆ ಅಂಥ ತಿರಸ್ಕಾರವುಳ್ಳ ನಾಗರಿಕತೆಯಿಂದ ದೂರವಾದ ಮಲೆನಾಡಿನ ದಟ್ಟಾರಣ್ಯದ ನಡುವೆ ಬದುಕುತ್ತಿರುವ ಇಲ್ಲಿನ ಪಾತ್ರಗಳು ಮಣ್ಣಿನಿಂದ ಹೊರತಾದವರಲ್ಲ. ಕ್ರಿಯಾತ್ಮಕ ತುಡಿತಕ್ಕನುಗುಣವಾಗಿ ಯಾವ ಕೃತಕತೆಯೂ ಇಲ್ಲದೆ ಬದುಕುವಂಥವರು.

ಕಾದಂಬರಿಯ ಬಹಳಷ್ಟು ಅವಕಾಶವನ್ನು ವ್ಯಾಪಿಸಿರುವ ಪ್ರಮುಖ ಪಾತ್ರಗಳಾದ ಹೊಲೆಯರ ಗುತ್ತಿ ಮತ್ತು ತಿಮ್ಮಿ. ಬಿಲ್ಲವರ ಐತ ಮತ್ತು ಪೀಂಚಲು, ಗೌಡರ ಮುಕುಂದಯ್ಯ ಮತ್ತು ಚಿನ್ನಮ್ಮ. ಈ ಮೂರು ಜೋಡಿಗಳು ಮೂರು ವರ್ಗಕ್ಕೆ ಸೇರಿದವರು. ಇದರಲ್ಲಿ ಒಡೆದು ಕಾಣುವ ವ್ಯತ್ಯಾಸವಿಲ್ಲದಿದ್ದರೂ ಸೂಕ್ಷ್ಮವಾಗಿ ನಿಸರ್ಗಕ್ಕೂ ಇವರಿಗೂ ಇರುವ ನಿಕಟಸಂಬಂಧವನ್ನು ಗುರುತಿಸಬಹುದು.

ಈ ಕಾದಂಬರಿಯ ಒಟ್ಟು ನಿಲುವು 'ಕಾನೂರು ಹೆಗ್ಗಡತಿ'ಗಿಂತ ಬೇರೆಯಾಗಿದೆ. ಆ ಕಾದಂಬರಿಯಲ್ಲಿ ಕಥೆಯಿದ್ದರೂ ಕಥನ ತಂತ್ರಕ್ಕೆ ಅಷ್ಟೊಂದು ಮಹತ್ವವಿಲ್ಲ. ಕಥನ

ತಂತ್ರದ ಹಿಂದಿನ ತತ್ವವನ್ನು 'ಕಾನೂರು ಹೆಗ್ಗಡತಿ' ಒಪ್ಪಿಕೊಳ್ಳುವಂತೆ 'ಮಲೆಗಳಲ್ಲಿ ಮದುಮಗಳು' ಒಪ್ಪಿಕೊಳ್ಳುವುದಿಲ್ಲ. ಮುಕುಂದಯ್ಯನ ಪ್ರಣಯ, ದೇವಯ್ಯನ ಮತಾಂತರ, ದೊಡ್ಡಣ್ಣ ಹೆಗ್ಗಡೆಯ ಯಾತ್ರೆ, ನಾಯಿಗುತ್ತಿ, ತಿಮ್ಮಿಯರ ಮದುವೆಯ ಪ್ರಸಂಗ, ಅಂತಕ್ಕನ ಮಗಳು ಕಾವೇರಿಯ ಆತ್ಮಹತ್ಯೆ ಮೊದಲಾದ ಮಹತ್ವದ ಪ್ರಸಂಗಗಳು ಕಾಲಕ್ರಮದ ಸಾತತ್ಯದಲ್ಲಿ ನಡೆಯದೆ ಸಮಾನಾಂತರವಾಗಿ ನಡೆಯುತ್ತವೆ. ಇಲ್ಲಿಯೂ ನಿಸರ್ಗ ಮನುಷ್ಯನ ವ್ಯವಹಾರದಲ್ಲಿ ಸಕ್ರಿಯವಾಗಿ ಭಾಗವಹಿಸುತ್ತದೆ. ಹುಲಿಕಲ್ಲು ಶಿಖರವಿಲ್ಲದಿದ್ದರೆ ಬಹುಶಃ ಚಿನ್ನಮ್ಮ ಮತ್ತು ಮುಕುಂದಯ್ಯನ ಪ್ರಣಯ ಸಫಲಗೊಳ್ಳುತ್ತಿರಲಿಲ್ಲ. ಹೀಗಾಗಿ ಪ್ರತಿಯೊಂದು ಪಾತ್ರದ ಕ್ರಿಯಾತ್ಮಕ ಬೆಳವಣಿಗೆಯಲ್ಲಿ ಪ್ರಕೃತಿ ಹಿನ್ನೆಲೆಯಾಗಿ ನಿಲ್ಲುತ್ತದೆ. ನಿಸರ್ಗದ ವೇದಿಕೆಗಳಲ್ಲೇ ಎಲ್ಲ ಪ್ರಮುಖ ಘಟನೆಗಳೂ ಘಟಿಸುತ್ತವೆ. ಈ ಮಾತು ಅವರ ಎರಡೂ ಕಾದಂಬರಿಗಳಿಗೂ ಅನ್ವಯಿಸುತ್ತದೆ.

# ಅಧ್ಯಾಯ – ೩

# ಕುವೆಂಪು ಕಾದಂಬರಿಗಳಲ್ಲಿ ಜಮಿನ್ದಾರಿ ಪದ್ಧತಿ ಮತ್ತು ದಲಿತ ಶೋಷಣೆಯ ಅಭಿವ್ಯಕ್ತಿ ಚಿತ್ರ

ಪ್ರಾಚೀನ ಕಾಲದಿಂದಲೂ ಭಾರತದಲ್ಲಿ ಸರ್ಕಾರಗಳು ರೈತರಿಂದ ಜಮೀನಿನ ಹುಟ್ಟುವಳಿಯಲ್ಲಿ ಒಂದು ಭಾಗವನ್ನು ಕಂದಾಯವಾಗಿ ಪಡೆಯುತ್ತ ಬಂದಿವೆ. ಜಮೀನ್ದಾರಿ ಪದ್ಧತಿಯನ್ನು ಕುರಿತು ಕನ್ನಡ ವಿಶ್ವಕೋಶದಲ್ಲಿ ಹೀಗೆ ತಿಳಿಸಿದೆ. "ಮೊಗಲರ ಸಾಮ್ರಾಜ್ಯ ಉಚ್ಛ್ರಾಯ ಸ್ಥಿತಿಯಲ್ಲಿದ್ದಾಗ ವ್ಯಾಪಕವಾಗಿ ಜಾರಿಯಲ್ಲಿದ್ದು ಈ ಪದ್ಧತಿ ಹುಟ್ಟಿಕೊಂಡಿತು. "ಮೊಗಲ್ ಸಾಮ್ರಾಜ್ಯ ಕ್ಷೀಣಿಸತೊಡಗಿದಾಗ ದೆಹಲಿಯ ಸರ್ಕಾರಕ್ಕೆ ತನ್ನ ಸಾಮ್ರಾಜ್ಯದ ರೂಢಿ ಪ್ರಾಂತ್ಯಗಳಲ್ಲಿದ್ದ ಕಂದಾಯ ವಸೂಲಿ ಅಧಿಕಾರಿಗಳ ಮೇಲೆ ಸರಿಯಾದ ಹತೋಟಿ ಇಟ್ಟುಕೊಳ್ಳುವುದು ಸಾಧ್ಯವಾಗದೆ ಹೋಯಿತು. ಕೇಂದ್ರ ಸರ್ಕಾರದ ಬೊಕ್ಕಸಕ್ಕೆ ವರಮಾನ ತಪ್ಪದಂತೆ ಯಾವುದಾದರೊಂದು ವ್ಯವಸ್ಥೆಯನ್ನು ರೂಪಿಸಿಕೊಳ್ಳುವುದು ಅಗತ್ಯವೆನಿಸಿತು. ಪಾರೂಕ್ ಸಿಯಾರನ ಆಳ್ವಿಕೆಯ ಕಾಲದಲ್ಲಿ (೧೭೧೩–೧೭೧೯) ಜಮಿನ್ದಾರಿ ಪದ್ಧತಿ ಖಚಿತವಾಗಿ ರೂಪುಗೊಂಡಿತೆನ್ನಬಹುದು."[೧] ಮಿಶ್ರ ಮತ್ತು ಪುರಿಯವರು ಜಮೀನ್ದಾರಿ ಪದ್ಧತಿಯನ್ನು ಕುರಿತು ಚರ್ಚಿಸುತ್ತಾ "Zmindary system was created by the East India Company When in 1793. Lord Corn-wallis entered into "permanent settlement' with land lords with a view to increasing revenue of the company. Under the settlement the land lord (Known as Zamindars) were declared full propritors of large areas of land"[೨] ಎಂದು ಹೇಳಿರುವುದು ಜಮೀನ್ದಾರಿ ಪದ್ಧತಿಯ ಬಗ್ಗೆ ಹೆಚ್ಚಿನ ವಿಷಯವನ್ನು ತಿಳಿಸಿದಂತಾಗಿದೆ.

ಕುವೆಂಪು ಕಾದಂಬರಿಗಳಲ್ಲಿ ಪ್ರಮುಖವಾಗಿ ನಾಲ್ಕು ಜಾತಿಗಳು ಕಂಡುಬರುತ್ತವೆ. ಅವು:

೧) ಬ್ರಾಹ್ಮಣರು

೨) ಗೌಡರು (ಒಕ್ಕಲಿಗರು)

---

೧. ಕನ್ನಡ ವಿಶ್ವಕೋಶ, ಪು. ೮೦೭, ಸಂಪುಟ.೭, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು. ೧೯೯೩.

೨. Misra and Puri, Indian Economy, Page No. 422, Himalaya Pablishing House, 1954.

೩) ಮುಸ್ಲಿಮರು

೪) ಕ್ರಿಶ್ಚಿಯನ್ನರು

೫) ಇತರ ಕೆಳಜಾತಿಗಳು

ಬ್ರಾಹ್ಮಣರು ಮೈಬಗ್ಗಿಸಿ ದುಡಿಯುವವರಲ್ಲ. ಹಳ್ಳಿಗರಿಗೆ ಮೌಢ್ಯವನ್ನೇ ಉಪದೇಶ ಮಾಡಿ, ನಿಮಿತ್ತ ಹೇಳುವುದು, ವಿಭೂತಿ ಕೊಡುವುದು, ಖಾಯಿಲೆ ಬಿದ್ದರೆ ಔಷಧಿ ಮಾಡಿ ಎಂದು ಹೇಳುವ ಬದಲು ಬೂದಿ, ಕುಂಕುಮ ಹಚ್ಚಿ ಮಂತ್ರ ಹಾಕುವುದು ಇತ್ಯಾದಿ ತಂತ್ರಗಳಿಂದ ಜನಸಾಮಾನ್ಯರನ್ನು ಶೋಷಣೆ ಮಾಡುತ್ತಾರೆ. ಇವರಿಗೆ ವೇದಶಾಸ್ತ್ರ ಪುರಾಣಗಳೇ ಬಂಡವಾಳ. ಅವುಗಳಿಂದಲೇ ಅವರ ಜೀವನ. ಅದಾಗ್ಯೂ ಅವರ ಜೀವನಕ್ಕೆ ಯಾವ ಕೊರತೆಯೂ ಇಲ್ಲ. ಬ್ರಾಹ್ಮಣರ ಅಗ್ರಹಾರದ ಊಟ, ರಸಾಯನ ಶೂದ್ರರ ಪಾಲಿಗೆ ಸ್ವರ್ಗ ಭೋಜನ. ಇವರು ಜಾತಿ ಶ್ರೇಣಿಯ ತುತ್ತ ತುದಿಯಲ್ಲಿದ್ದಾರೆ. ಮಂಜಭಟ್ಟರಂತಹವರು ಲೇವಾದೇವಿಯಿಂದ ಭೂ ಒಡೆತನವನ್ನು ಪಡೆದಿದ್ದಾರೆ. ಬೌದ್ಧಿಕವಾಗಿ ಎಲ್ಲರ ಮೇಲೂ ಅವರ ಹಿಡಿತವಿದೆ. ವೇದ, ಪುರಾಣಗಳನ್ನು ಪ್ರಶ್ನಿಸುವ ಹೂವಯ್ಯ , ದೇವಯ್ಯನಂತವರನ್ನು ಅವರು ಸಹಿಸರು. ತಮ್ಮ ವರ್ಗ ಹಿತಾಶಕ್ತಿಯನ್ನು ಕಾಪಾಡಿಕೊಳ್ಳಲು ಎಂತಹ ನೀಚ ಕೆಲಸಕ್ಕೂ ಅವರು ಇಳಿಯಬಹುದು.

ಒಕ್ಕಲಿಗರು ಅಥವಾ ಗೌಡರು ಭೂಮಾಲೀಕರು. ತಮ್ಮನ್ನು ಬಿಟ್ಟು ಅನ್ಯರು ಭೂಮಾಲೀಕರಾಗಕೂಡದೆಂದು ಇವರ ತಗಾದೆ. ತಮ್ಮ ಇಚ್ಛೆಗೆ ವಿರುದ್ಧವಾಗಿ ಭೂ ಸಾಗುವಳಿ ಮಾಡಹೊರಟ ಹಳೆಪೈಕದ ಸೇಸನಾಯ್ಕರ ಮೇಲೆ ಅವರಿಗೆ ಜಿದ್ದು. ಬ್ರಾಹ್ಮಣರನ್ನು ಬಿಟ್ಟರೆ ಇವರೇ ಉತ್ತಮ ಜಾತಿಯವರು. ಬಿಲ್ಲವರು, ಹಸಲರು, ಕುಂಬಾರರು, ಹಳೆಪೈಕದವರು ಇತ್ಯಾದಿ ಘಟ್ಟದ ಕೆಳಗಿನವರು ಮತ್ತು ಎಲ್ಲ ಅಸ್ಪೃಶ್ಯರು ಹೊಲ-ಗದ್ದೆಗಳಲ್ಲಿ ದುಡಿಯುವ ಶ್ರಮಜೀವಿಗಳು. ಬ್ರಾಹ್ಮಣರು ಬೌದ್ಧಿಕವಾಗಿ ಸಮಾಜದ ಎಲ್ಲ ವರ್ಗಗಳ ಮೇಲೂ ಹಿಡಿತವನ್ನಿಟ್ಟುಕೊಂಡಿದ್ದಾರೆ. ಗೌಡರು ಆರ್ಥಿಕವಾಗಿ ಅದಕ್ಕಿಂತಲೂ ಬಿಗಿ ಹಿಡಿತವನ್ನಿಟ್ಟುಕೊಂಡಿದ್ದಾರೆ. ಕೂಲಿಯಾಳುಗಳೇ ಆಗಲಿ, ಜೀತದಾಳುಗಳೇ ಆಗಲಿ ಇವರ ಇಚ್ಛೆಗೆ ವಿರುದ್ಧವಾಗಿ ನಡೆದರೆ ಮುಸ್ಲಿಮರನ್ನು ಬಳಸಿಕೊಂಡು "ಹೊನ್ನಾಳಿ ಹೊಡೆತ"ದ ಮೂಲಕ ತಾವು ಹೇಳಿದ ಹಾಗೆ ಕೇಳುವಂತೆ ಮಾಡಿಕೊಳ್ಳುತ್ತಿದ್ದರು. ಅಷ್ಟೇ ಅಲ್ಲ ದಲಿತರ ಬದುಕು, ಆಗು-ಹೋಗು, ಜನನ, ಮರಣ, ಮದುವೆ, ಹಬ್ಬ-ಸಾಲ-ಸೂಲ ಎಲ್ಲಕ್ಕೂ ಬ್ರಹ್ಮ, ವಿಷ್ಣು, ಮಹದೇಶ್ವರಾಗಿದ್ದರು. ಹೆಗ್ಗಡೆಯವರು ಗೌಡರ ಆಸ್ತಿಯನ್ನು ಭಾಗ ಮಾಡಿಕೊಳ್ಳುವಂತೆ ದಲಿತರನ್ನು

ಭಾಗಮಾಡಿಕೊಳ್ಳುತ್ತಿದ್ದರು. ಬ್ರಾಹ್ಮಣ ಬೌದ್ಧಿಕ ಶೋಷಣೆಯ ಒಂದು ಮುಖವಾದರೆ ಗೌಡ ಆರ್ಥಿಕ ಶೋಷಣೆಯ ಇನ್ನೊಂದು ಮುಖ ಎನ್ನಲಾಗಿದೆ. ಮೇಲು ನೋಟಕ್ಕೆ ಎರಡೂ ಕಾದಂಬರಿಗಳು ಜಮೀನ್ದಾರರು ಮತ್ತು ಅವರ ಮಕ್ಕಳ ಏಳುಬೀಳಿನ ಕಥಾಹಂದರವುಳ್ಳವು."[೧] ಎಂದು ರಹಮತ್ ತರಿಕೆರೆಯವರು ತಳೆಯುವ ನಿಲುವು ಸಹಜವಾಗಿದೆ. ಚಂದ್ರಯ್ಯಗೌಡರ ಸಾಲಗಾರರಿಬ್ಬರು ಒಟ್ಟಿಗೆ ಬಂದು ತಮ್ಮ ಉದ್ದೇಶಗಳನ್ನು ನೆರವೇರಿಸಿಕೊಳ್ಳುವ ಪ್ರಸಂಗವೊಂದು ಮಾರ್ಮಿಕವಾಗಿ ಉದ್ದೇಶ-ಪೂರ್ವಕವಾಗಿ ಬಂದಿದೆ. ಚಂದ್ರಯ್ಯಗೌಡರ ಗದ್ದೆಯಲ್ಲಿ ಒಕ್ಕಲಾಗಿ ದುಡಿಯುವ ಅಣ್ಣಯ್ಯಗೌಡರು ಚಿಕ್ಕಾಸೂ ಹುಟ್ಟಿಸದೆ ಬೀಮಾರಿ ಹಾಕಿಸಿಕೊಂಡು ಕಣ್ಣೀರು ಸುರಿಸುತ್ತ ಹೋದರೆ, ವೆಂಕಪ್ಪಯ್ಯ ಜೋಯಿಸರು ಸತ್ಯನಾರಾಯಣ ವ್ರತದ ಖರ್ಚನ್ನು ವಸೂಲಿಮಾಡಿಕೊಂಡು ಸಗೌರವದಿಂದ ಬೀಳುಕೊಳ್ಳುತ್ತಾರೆ. ಆಗ ಅವರು ಮಾಡುವ ಉಪದೇಶ ಹೀಗಿದೆ:

"ನಾನು ಹೇಳಿದ್ದೆ ನಿನಗೆ ಮೊದಲೇ ಈಗಿನ ವಿದ್ಯಾಭ್ಯಾಸ ಹುಡುಗರನ್ನು ಹಾಳು ಮಾಡುತ್ತದೆ ಎಂದು... . . ನಿನ್ನ ಮನೆ ಜಮೀನು ಉಳಿಯಬೇಕಾದರೆ ಅವರ ಓದು ನಿಲ್ಲಿಸು, ಮದುವೆ ಮಾಡಿ ಕೆಲಸಕ್ಕೆ ಹಚ್ಚು"[೨]

ಬ್ರಾಹ್ಮಣ ಕೂಡ ಒತ್ತಾಯಪೂರ್ವಕವಾಗಿ ಶೂದ್ರವರ್ಗದ ಮೇಲೆ ಜಮೀನ್ದಾರಿ ವ್ಯವಸ್ಥೆಯನ್ನು ವ್ಯವಸ್ಥಿತವಾಗಿ ಹೇರುವುದು ಈ ಮೂಲಕ ಕಂಡುಬರುತ್ತದೆ.

ರಂಗಪ್ಪಗೌಡರು ಚಿಂಕ್ರನ ಸಾಲಕ್ಕೆ ಅಕ್ಕಣಿಯ ಕಡೆಯಿಂದ ಧರ್ಮಸ್ಥಳದಾಣೆ ಮಾಡಿಸಿಕೊಳ್ಳುತ್ತಾನೆ. ದೆಯ್ಯ- ಭೂತಾದಿಗಳು ಭೂಮಾಲೀಕರು, ಆಸ್ತಿರಕ್ಷಣೆಗೆಂದು ನಿರ್ಮಾಣ ಮಾಡಿದ ಕಾನೂನು ಪೊಲೀಸುಗಳಂತೆ ಕೆಲಸ ಮಾಡುತ್ತವೆ. ಕಲ್ಲೂರು ಮಂಜಭಟ್ಟರು ದೇವರೊಡನೆ ಸಂವಾದ ಮಾಡಿ ತಮ್ಮ ವಿವಾದಗಳನ್ನು ಇತ್ಯರ್ಥಗೊಳಿಸಿಕೊಂಡು ಬಹುಬೇಗನೆ ಪುಣ್ಯವಂತರಾಗುತ್ತಾರೆ. ತಮ್ಮ ತಪ್ಪಿಲ್ಲದಿದ್ದರೂ ಕೆಳವರ್ಗವೆಲ್ಲ ಈ ಪೊಲೀಸು-ಲಾಕಪ್ಪುಗಳಿಗೆ ಗಡಗಡ ನಡುಗುತ್ತದೆ.

ಭೂಮಾಲೀಕರ ಕ್ರೌರ್ಯ ಮತ್ತು ದುಡಿವ ವರ್ಗದ ದಮನೀಯ ಸ್ಥಿತಿಯ ಚಿತ್ರಣದಲ್ಲಿ ಲೇಖಕನ ಸಂಯಮವು ಆ ಕ್ರೌರ್ಯದ ತೀವ್ರತೆಯನ್ನು ಹೆಚ್ಚಿಸಿಬಿಟ್ಟಿದೆ. ಯಾರೋ ನೇಗಿಲು ಮುರಿದುದಕ್ಕೆ ಬೇಲರ ಸಿದ್ದನಿಗೆ ಸಿಗುವ ಶಿಕ್ಷೆ, ಸಣ್ಣಬೀರನಿಗೆ ಬೀಳುವ 'ಹೊನ್ನಾಳಿ ಹೊಡ್ತ' ಇವೆಲ್ಲ ಊಳಿಗಮಾನ್ಯ ವ್ಯವಸ್ಥೆಯ ಬರ್ಬರತೆಗೆ

---

೧. ರಹಮತ್ ತರೀಕೆರೆ, ಕುವೆಂಪು ಕಾದಂಬರಿಗಳಲ್ಲಿ ಸಂಘರ್ಷಗಳ ಸ್ವರೂಪ, ಪು. ೨೧೨.

೨.. ಕುವೆಂಪು ಕಾನೂರು ಹೆಗ್ಗಡತಿ, ಪು. ೭೪, ಉದಯರವಿ ಪ್ರಕಾಶನ, ಮೈಸೂರು.

ನಿದರ್ಶನಗಳಂತಿವೆ. ಜೀತದಾಳು ಹೊಲೆಯನೊಬ್ಬನ ಎದೆಯಮೇಲೆ ಹಲಗೆ ಹಾಕಿ ಮೆಟ್ಟಿಸಿ, ಅವನು ರಕ್ತಕಾರಿ ಸತ್ತದ್ದರ ಉಲ್ಲೇಖವೂ ಒಂದು ಕಡೆ ಬರುತ್ತದೆ. ಜೀತದಾಳು ದೇಯಿಯ ಸಾವನ್ನು ಧಣಿಗಳಾದ ರಂಗಪ್ಪಗೌಡರು ತಣ್ಣಗೆ ಸ್ವೀಕರಿಸುವ ರೀತಿಯಂತೂ ಭಯಾನಕವಾಗಿದೆ. ಪಾತ್ರೆಪಡಗೆಗಳಂತೆ ಆಳುಗಳು ಮನೆಹಿಸ್ಸೆಯಲ್ಲಿ ಪಾಲಾಗುತ್ತಾರೆ. ಒಡೆಯರ ಕಣ್ಣು ಹೆದರಿಕೆ, ಕೊರಳು ಹೆದರಿಕೆಗಳಿಂದ ಒಂದು ಮಾತನ್ನೂ ಆಡದೆ ಮಣಿದು ಬಿಡುತ್ತಾರೆ. ತಮ್ಮ ಜಾತಿಯವರೇ ಆದ ಅಣ್ಣಯ್ಯ ಗೌಡರನ್ನು ಚಂದ್ರಯ್ಯಗೌಡರು ಮೇಗರವಳ್ಳಿಯ ಹೆಗ್ಗಡೆಯವರು ಹೊಸಕಿ ಹಾಕುವುದು ಬೀಭತ್ಸವನ್ನು ಮೀರಿಸುತ್ತದೆ. ಬಡತನದ ಶಕ್ತಿಯೆಂಥದ್ದೆಂದರೆ ಅದು ಮನುಷ್ಯನನ್ನು ದೈನ್ಯಕ್ಕಿಳಿಸಿ, ಅವನ ಸಮಸ್ತ ಚೈತನ್ಯವನ್ನೇ ಉಡುಗಿಸಿಬಿಡುತ್ತದೆ. ಸುಬ್ಬಮ್ಮ ಮತ್ತು ಅವಳ ತಂದೆ ಚಂದ್ರಯ್ಯಗೌಡರ ಸಿರಿತನಕ್ಕೆ ಮರುಳಾಗಿ ಆಮೇಲೆ ಪಡುವ ಪಾಡನ್ನು ಗಮನಿಸಬಹುದು. ಖಾಸಗೀ ಆಸ್ತಿಗೆ ಎರಡು ಶಕ್ತಿಗಳಿದ್ದು ಅದು ಭೂಮಾಲೀಕರಲ್ಲಿ ದರ್ಪವನ್ನು ತುಂಬಿದರೆ, ಸಾಮಾನ್ಯರಲ್ಲಿ ದಿಟ್ಟತನವನ್ನು ಸ್ವಾಭಿಮಾನವನ್ನು ತರಬಲ್ಲದು. ಹಳೆಪೈಕದವರು ದಂಡಿಗೆ ಹತ್ತಬಾರದೆನ್ನುವ ಠರಾವನ್ನು ಹಳೆಪೈಕದ ಒಕ್ಕಲೂಗಳೂ ಜೀತದಾಳುಗಳೂ ಪ್ರತಿಭಟಿಸದೆ ಸೇಸನಾಯ್ಕನಂತ ಸ್ವಂತ ಜಮೀನ್ದಾರರು ಮಾತ್ರ ಪ್ರತಿಭಟಿಸುತ್ತಾರೆ. ಆದರೆ ಆಸ್ತಿಯಿಲ್ಲದವನ ಛಲಗಳು ವ್ಯವಸ್ಥೆಯ ಕಣ್ಣಿಗೆ ಅಹಂಕಾರದಂತೆ ತೋರುತ್ತವೆ.

ಕಾಗೋಡು ಸತ್ಯಾಗ್ರಹದ ಅಧ್ಯಯನದಲ್ಲಿ ಜಿ.ರಾಜಶೇಖರ್ ಅವರು ಕೊಡುವ ಮಲೆನಾಡು ಭಾಗದ ಜೀತದಾಳುಗಳ ವಿವರಗಳು ಹೀಗೆ ಇವೆ. ಸೇರಗಾರರೂ, ಭೂಮಾಲೀಕರೂ ಅಕ್ಷರಶಃ ಅವರನ್ನು ಪ್ರಾಣಿಗಳಂತೆ ನಡೆಸಿಕೊಂಡಿದ್ದಾರೆ. ಸಿಂಗಪ್ಪಗೌಡರಿಗೂ – ಚಂದ್ರಯ್ಯಗೌಡರಿಗೂ ಆದಂತೆ ಬೆಟ್ಟಳ್ಳಿಯವರಿಗೂ ಸಿಂಭಾವಿ ಮನೆಯವರಿಗೂ ಕೂಲಿಯಾಳಿನ ವಿಚಾರದಲ್ಲೇ ಮನಸ್ತಾಪ ಉಂಟಾಗಿದ್ದು, ಗುತ್ತಿ ಮದುವೆಯಲ್ಲಿ ಅದು ಮತ್ತೆ ಅನುರಣೀಸುತ್ತದೆ. ತನ್ನ ಹೊಲೆಯಾಳಿನ ಹೆಂಡತಿಯನ್ನು ಜಮೀನುದಾರನೊಬ್ಬನು 'ಅವಸರನಿಮಿತ್ತ'ವಾಗಿ ಮೂರು ವರಹಗಳಿಗೆ ಮತ್ತೊಬ್ಬ ಜಮೀನುದಾರನಿಗೆ ಮಾರಾಟ ಮಾಡಿದ ಬಗೆಗೆ ಇರುವ ತಾಮ್ರ ಶಾಸನವು ಇದೇ ಪ್ರಾಂತ್ಯಕ್ಕೆ ಇದೇ ಕಾಲಕ್ಕೆ ಸೇರಿದುದು. [೧] ಕೌಟುಂಬಿಕವಾದ ಭಾವನಾತ್ಮಕ ಸಂಬಂಧಗಳನ್ನು ಖಾಸಗೀ ಪ್ರೇಮ ಪ್ರೀತಿಗೂ ಒಡೆಯರ ಲಾಭ–ನಷ್ಟಗಳ ದೃಷ್ಟಿಯಲ್ಲಿ ನಿರ್ಧಾರವಾಗುವುದನ್ನು ಕಾದಂಬರಿಕಾರ ವಿಶ್ಲೇಷಿಸುವುದ ಹೀಗೆ:

---

೧. ಜಿ.ರಾಮಕೃಷ್ಣ, ಜೀತಪದ್ಧತಿ,' ಒಂದು ಪಕ್ಷಿನೋಟ, ಮುನ್ನೋಟ, ಪು. ೨೦೮, ೧೯೮೦

"ಒಡೆಯರಿಗೆ ಬೇಕಾಗಿರುವುದು ಜೀತ ಮಾಡಲು ಒಂದು ಆಳು. ತಮ್ಮ ಹೊಲಗೇರಿಯ ಒಂದು ಹೆಣ್ಣನ್ನು ಹೊರಗೆ ಕೊಟ್ಟರೆ ತಮ್ಮ ಕೆಲಸಕ್ಕೆ ಒಂದಾಳು ಖೋತ ಬೀಳುತ್ತದೆ. ಆದ್ದರಿಂದ ಕೇರಿಯ ಹೆಣ್ಣನ್ನು ಕೇರಿಯ ಗಂಡೇ ಮದುವೆಯಾಗಬೇಕು ಎಂಬುದು ಅವರ ಕಟ್ಟಪ್ಪಣೆ. ಬೇರೆ ಹಳ್ಳಿಯ ಕೇರಿಯವನಿಂದ ತಾಳಿ ಕಟ್ಟಿಸಿಕೊಂಡಿದ್ದರೂ ಸರಿ. ಅವಳನ್ನು ಎಳೆದು ತರಿಸಿ, ತಾಳಿ ಕೀಳಿಸಿ, ತಮ್ಮ ಕೇರಿಯವನಿಗೇ ಮದುವೆ ಮಾಡಿಸುತ್ತಿದ್ದರೆಂಬುದರಲ್ಲಿ ಸಂದೇಹವಿರಲಿಲ್ಲ. ಅಪ್ಪಿತಪ್ಪಿ ಒಡೆಯರ ಇಚ್ಛೆಗೆ ವಿರೋಧವಾಗಿ ನಡೆದು ಬಂದವರಿಗೆ ಹಿಂದೆ ಅಂತಹ ಗತಿಯೇ ಒದಗುತ್ತಿತ್ತು. ಕೀಳುಜಾತಿಯವರಿಗೆ ಅವರ ಇಚ್ಛಾನುಸಾರ ಒಲವು ಅಕ್ಕರೆ ಇರುವುದೆಂದರೇನು?"[೧] ಸಾಲ ಕೊಡುವ ಮೂಲಕ ಇಲ್ಲಿನ ಒಡೆಯರು ದುಡಿವ ವರ್ಗದ ಬದುಕನ್ನೇ ತಿದ್ದಬಲ್ಲವರಾಗಿದ್ದಾರೆ. ಪ್ರತಿ ಜೀತದಾಳುವೂ ತನ್ನ ಪೂರ್ವಜರ ಸಾಲಕ್ಕೆ ಬಾಕಿದಾರನೇ ಆಗಿದ್ದು, ಈ ಸಾಲ ವ್ಯವಸ್ಥೆಯು ಅನಿವಾರ್ಯ ಬೆಳವಣಿಗೆಯಂತೆ ಇಲ್ಲಿನ ವಸೂಲಿ ಸಾಬರ ಕ್ರೌರ್ಯಗಳಾಗಿವೆ. ಮೂಲತಃ ಜೀತದಾಳುಗಳೇ ಆಗಿರುವ ಈ ಪುಂಡರ ಪಾಶವೀಶಕ್ತಿಯನ್ನು ಫ್ಯೂಡಲ್ ವ್ಯವಸ್ಥೆಯನ್ನು ತನ್ನ ಅಸ್ತಿತ್ವಕ್ಕಾಗಿಯೇ ಸಾಕುತ್ತದೆ. ಒಡೆಯರ ಕೋಪದ್ವೇಷಗಳ ಪ್ರಾತಿನಿಧಿಕ ಆಯುಧಗಳಾಗಿ ಕೆಲಸಮಾಡುವ ಕಿಲಿಸ್ತರ ಜಾಕಿ ಅಥವಾ ಪುಂಡುಸಾಬರ ಕ್ರೌರ್ಯಕ್ಕೂ ಅವರ ಮತಗಳಿಗೂ ಏನು ಸಂಬಂಧವಿಲ್ಲದಿದ್ದರೂ ಸಾಮಾಜಿಕ ಹಿಂದೂಳಿದಿರುವಿಕೆ, ಅಜ್ಞಾನಗಳ ಕಾರಣದಿಂದ ಅವರು ಈ ಎಲ್ಲ 'ಚಾಂಡಾಲಸೇವೆ'ಯನ್ನು ಮಾಡುತ್ತಾರೆ. ಹಾಗೇ ಕಂಡರೆ ಈ ಮಲೆನಾಡಿನ ಆರ್ಥಿಕ ಜೀವನದಲ್ಲಿ ಸಣ್ಣಪುಟ್ಟ ರೈತವರ್ಗ ಹೆಚ್ಚು ಕಡಿಮೆ ಇಲ್ಲವೇ ಇಲ್ಲ. ಭಾರೀ ಭೂಮಾಲೀಕರು ಮತ್ತು ಅಪಾರ ಸಂಖ್ಯೆಯ ಜೀತದಾಳುಗಳು ಮಾತ್ರ ಇದ್ದಾರೆ.

ಕುವೆಂಪು ಕಾದಂಬರಿಗಳಲ್ಲಿ ದಲಿತ ಜೀವನ ಚಿತ್ರಣವು ದಟ್ಟವಾಗಿ ಹರಡಿರುವುದನ್ನು ಕಾಣಬಹುದಾಗಿದೆ. "ದಲಿತರ ಬೌದ್ಧಿಕ, ಮಾನಸಿಕ ಹಾಗೂ ದೈಹಿಕ-ಆರ್ಥಿಕ ದಿವಾಳತನಕ್ಕೆ ಬ್ರಾಹ್ಮಣರು ಪರೋಕ್ಷವಾಗಿಯೂ ಗೌಡರು ಪ್ರತ್ಯಕ್ಷವಾಗಿಯೂ ಕಾರಣರಾಗಿದ್ದಾರೆ."[೨] ಎಂದು ಬಿ.ಕೃಷ್ಣಪ್ಪನವರು ಹೇಳುತ್ತಾರೆ.

---

೧. ಕುವೆಂಪು ಮಲೆಯಲ್ಲಿ ಮದುಮಗಳು, ಪು. ೧೫೫, ಉದಯರವಿ ಪ್ರಕಾಶನ, ಮೈಸೂರು, ೨೦೧೦,

೨. ಬಿ.ಕೃಷ್ಣಪ್ಪ, ಕುವೆಂಪು ಕಾದಂಬರಿಗಳಲ್ಲಿ ದಲಿತ ಜೀವನ, ಪು. ೨೦೦, ಸಹ್ಯಾದ್ರಿಯ ಸೂರ್ಯ, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು ೨೦೧೦.

ಇದನ್ನು ಕಾದಂಬರಿಯಲ್ಲಿ ಬರುವ ಪಾತ್ರದ ಹಿನ್ನೆಲೆಯಲ್ಲಿ ಸರಿಯೆಂದು ಒಪ್ಪಬಹುದಾಗಿದೆ. ಬ್ರಾಹ್ಮಣನ ಕೆಳಗೆ ಗೌಡ, ಗೌಡನ ಕೆಳಗೆ ದಲಿತರು, ಜಾತಿಯ ಪಿರಮಡ್ ರಚನೆಯಲ್ಲಿ ಬ್ರಾಹ್ಮಣನ ಪಾದ ಶೂದ್ರನ ತಲೆಯ ಮೇಲಿದ್ದರೆ ಶೂದ್ರನ ಪಾದಗಳು ದಲಿತನ ತಲೆಯ ಮೇಲಿದೆ. ಹೀಗಾಗಿ ದಲಿತರ ಮೇಲಿನ ತುಳಿತವು ಬ್ರಾಹ್ಮಣನಿಗಿಂತ ಶೂದ್ರನಿಂದ ನೇರವೂ ಆಗಿ ಪರಿಣಮಿಸಿ, ಅಮಾನುಷವಾಗುತ್ತದೆ.

ಭಾರತದಂತಹ ಜಾತಿ ಇರುವ ದೇಶದಲ್ಲಿ ಯಾವುದೋ ಒಂದು ಜಾತಿಗೆ ಸೇರಿದ ಲೇಖಕ ಮತ್ತೊಂದು ಜಾತಿಯವರನ್ನು ಕುರಿತು ಬರೆಯುವಾಗ ಅಥವಾ ಬರೆದಾಗ ಅದು ಬರೆದ ಅಥವಾ ಚಿತ್ರಿಸಿರುವ ಮತ್ತೊಂದು ಜಾತಿಯ ಬದುಕು ನೈಜವಾಗಿದೆಯೆ ಅಥವಾ ಅಸಹಜವಾಗಿದೆಯೇ ಎಂಬ ಪ್ರಶ್ನೆ ಮೂಲಭೂತವಾಗುತ್ತದೆ. ಏಕೆಂದರೆ ಜಾತಿಗಳು ಅವನ ಸಾಮಾಜಿಕ ನಡವಳಿಕೆಯನ್ನು ಪ್ರತ್ಯೇಕಿಸುವುದರಿಂದ ಇಂಥ ಸಂದರ್ಭಗಳಲ್ಲಿಯೇ ಕವಿಯ ಅಥವಾ ಸಾಹಿತ್ಯದ ಪ್ರಾಮಾಣಿಕತೆ ಪ್ರಶ್ನಿಸಲ್ಪಡುವುದು. ಸಾಹಿತ್ಯದಲ್ಲಿ ನೈಜತೆಯನ್ನು ಕಾಪಾಡಿಕೊಂಡು ಬರಲು ಮೂರು ಅಂಶಗಳು ಪ್ರಮುಖ ಎನ್ನಿಸುತ್ತದೆ.

೧) ಲೇಖಕ ಮತ್ತೊಂದು ವರ್ಗದೊಂದಿಗೆ ಅಥವಾ ಜಾತಿಯೊಂದಿಗೆ ಮುಕ್ತವಾಗಿ ಬೆರೆಯುವ ಸಾಧ್ಯತೆ.

೨) ಸಮಕಾಲೀನತೆ

೩) ಪ್ರತಿಕೃತಿ ದೃಷ್ಟಿ

'ಕಾನೂರು ಹೆಗ್ಗಡತಿ' ಮತ್ತು 'ಮಲೆಗಳಲ್ಲಿ ಮದುಮಗಳು' ಕಾದಂಬರಿಯ ವಸ್ತುಗಳು ಹತ್ತೊಂಬತ್ತನೆ ಶತಮಾನದ ಉತ್ತರಾರ್ಧದ ಕಾಲದವುಗಳಾಗಿದ್ದು, ಕುವೆಂಪು ಅವರಿಗೆ ಸಮಕಾಲೀನವಾಗಿರದೆ, ಒಂದು ತಲೆಮಾರಿನ ಹಿಂದಿನ ವಸ್ತುವನ್ನು ಕುರಿತಿವೆ. ಮತ್ತು ಕುವೆಂಪು ಅವರು ಬಾಲ್ಯದಿಂದ ಹಿಡಿದು ಉನ್ನತ ವಿದ್ಯಾಭ್ಯಾಸವರೆವಿಗೂ ರಾಮಕೃಷ್ಣಾಶ್ರಮದಲ್ಲಿ ಬದುಕಿದ್ದುದರಿಂದ ಅವರು ಮಲೆನಾಡಿನ ದಲಿತರೊಂದಿಗೆ ಮುಕ್ತವಾಗಿ ಬೆರೆತಿದ್ದರೆ? ಎಂಬ ಪ್ರಶ್ನೆ ದೂರವಾಗಿಯೇ ಉಳದುಬಿಡುತ್ತದೆ. ಈ ದೃಷ್ಟಿಯಿಂದ ಐತಿಹಾಸಿಕ ಕೃತಿಯೊಂದನ್ನು ರಚಿಸುವುದು ಎಷ್ಟು ಕಷ್ಟದಾಯಕ ಎಂದು ಯಾರಾದರೂ ಯೋಚಿಸಬಹುದು. ಆದಾಗ್ಯೂ ಕುವೆಂಪು ಆಗಾಗ ರಜಾದ ಬಿಡುವಿನ ದಿನಗಳಲ್ಲಿ ಮಲೆನಾಡಿನಲ್ಲಿ ಸುತ್ತುತ್ತಿದ್ದರಿಂದ ಮತ್ತು ಮನೆಯಲ್ಲಿ ಸೋದರರೋ, ಗೆಳೆಯರೋ, ಬಂಧುಗಳೋ, ಕೂಲಿಯಾಳುಗಳೋ, ಜೀತದಾಳುಗಳೋ ಇದ್ದು ಅವರು ಹೇಳಿದ ವಿವರಗಳಿಂದ ಅಶ್ವತ್ಥ ವೃಕ್ಷಕ್ಕೆ ಬೇವು ಅಂಟಿಕೊಂಡಿರುವಂತೆ ಗೌಡರ ಸುತ್ತ

ಆಶ್ರಯಿಸಿಕೊಂಡು ಬದುಕುತ್ತಿರುವ ದಲಿತರ ಜೀವನವನ್ನು ಚಿತ್ರಿಸಲು ಸಾಧ್ಯವಾಗಿದೆ ಎಂಬುದು ಕೃಷ್ಣಪ್ಪನವರ ನಿಲುವು.

ದಲಿತರ ಬದುಕಿನಲ್ಲಿ ಹೊರಗನ್ನು, ಬಹಿರ್ ವ್ಯಾಪಾರವನ್ನು ಕುವೆಂಪು ಕುತೂಹಲಕಾರಿಯಾಗಿ ಚಿತ್ರಿಸುತ್ತರೆಂಬುದರಲ್ಲಿ ಯಾವ ಸಂಶಯವೂ ಇಲ್ಲ. ಬೇಲರ ಬೈರ ಕದ್ದು ಹೆಂಡ ಕಾಯಿಸುವುದು. ಕಿಲಿಸ್ತರ ಮಾರ್ಕನಿಗೆ ಮೂರು ನಾಮ ಹಾಕುವುದು. ಗಂಗ ಹುಡುಗ ಭೂತದ ಭೀತಿಯಿಂದ ಸಾವನ್ನಪ್ಪುವುದು, ಹೊಲಗೇರಿಯ ಕೊಳಕು, ಬಡಕಲು ನಾಯಿಗಳು, ಬೆಳಗಿನ ಬಿಸಿಲು ಕಾಯಿಸುತ್ತ ಹೇನು ಕೂರೆ ಕುಕ್ಕುವ ಹೊಲೆಯರು, ಗುತ್ತಿ ತಿಮ್ಮಿಯನ್ನು ಹಾರಿಸಿಕೊಂಡು ಹೋಗುವುದು, ಗುತ್ತಿ ಪೊಲೀಸರಿಂದ ತಪ್ಪಿಸಿಕೊಂಡು ಹೋಗುವುದು, ಕಲ್ಲೇಗೌಡರ ಆಜ್ಞೆ ಪ್ರಕಾರ ಇಜಾರದ ಸಾಬು ಸಣ್ಣಬೀರನನ್ನು ಕಟ್ಟಿ ಹುಣಸೆ ಬರಲಿನಿಂದ ಹೊಡೆಯುವುದು, ಗುತ್ತಿನಾಯಿ ಹುಲಿಯ ಪ್ರವಾಹದಲ್ಲಿ ಕೊಚ್ಚಿಹೋಗುವುದು ಇಂತಹ ಸಂದರ್ಭಗಳನ್ನು ಕಣ್ಣಿಗೆ ಕಟ್ಟುವಂತೆ ಪರಿಣಾಮಕಾರಿಯಾಗಿ ಚಿತ್ರಿಸುತ್ತಾರೆ.

ಹೂವಯ್ಯ-ರಾಮಯ್ಯ-ಸೀತೆಯರ ಪ್ರಣಯ ತ್ರಿಕೋಣ, ಸುಬ್ಬಣ್ಣ ಹೆಗ್ಗಡೆ ಮಗನಿಗಾಗಿ ಪಡುವ ವ್ಯಥೆ, ಗಂಡನನ್ನು ಕಳೆದುಕೊಂಡ ರಂಗಮ್ಮನ ದುಃಖ, ಮುಕುಂದಯ್ಯ-ಚಿನ್ನಮ್ಮರ ಮಾನಸಿಕ ಏರಿಳಿತ, ಚಂದ್ರೇಗೌಡರ ಆಕ್ರೋಶ, ಸಿಂಗಪ್ಪಗೌಡರ ಕುತಂತ್ರ, ಟೈಗರ್ ಕಳೆದುಕೊಂಡ ಪುಟ್ಟಣ್ಣನ ನೋವು ಇತ್ಯಾದಿಗಳನ್ನು ಮನಸ್ಸು ತೆರೆದು ವಿವರಿಸುವ ಕುವೆಂಪು ಪ್ರತಿಭೆ ಮೌಲ್ಯಯುತವಾದುದು. ಇದಕ್ಕೆ ಮತ್ತೊಂದು ನಿಚ್ಚಳ ಉದಾಹರಣೆ ಎಂದರೆ ಕಾನೂರು ಹೆಗ್ಗಡತಿಯಲ್ಲಿ ಬರುವ ಪುಟ್ಟಣ್ಣ-ಟೈಗರ್ ನಾಯಿ ಹಾಗೂ ಮಲೆಗಳಲ್ಲಿ ಮದುಮಗಳು ಕಾದಂಬರಿಯಲ್ಲಿ ಬರುವ ಗುತ್ತಿ-ಹುಲಿಯ ಪ್ರಸಂಗ. ಟೈಗರ್ ಪುಟ್ಟಣ್ಣನಿಗೆ ಜೀವವಾಗಿದ್ದಂತೆ, ಹುಲಿಯನೂ ಗುತ್ತಿಗೆ ಜೀತವಾಗಿತ್ತು. ಹಾಗೆ ನೋಡಿದರೆ ಕಾದಂಬರಿಯಲ್ಲಿ ಹುಲಿಯ – ಗುತ್ತಿ ಸಂಬಂಧ ವಿಸ್ತಾರವಾಗಿ ವರ್ಣಿತವಾಗಿರುವಂತೆ ಟೈಗರ್ ಪುಟ್ಟಣ್ಣನ ಸಂಬಂಧ ವರ್ಣಿತವಾಗಿಲ್ಲ. ಕುರ್ಕ ಕಚ್ಚಿದ್ದರಿಂದ ಹುಲಿಯ ತೀವ್ರ ಘಾಸಿಯಾಗಿತ್ತು ಇನ್ನೇನು ನಡೆಯಲಾರದೆಂದು ತಿಳಿದ ಗುತ್ತಿ ಹುಲಿಯನನ್ನು ಹೊತ್ತು ಸೇಸನಾಯ್ಕನ ಮನೆಯಲ್ಲಿ ಮದ್ದು ಹಾಕಿ ಹೆಂಡ ಕುಡಿಸಿ ಶುಶ್ರೂಷೆ ಮಾಡಲು ಹುಲಿಯನಿಗೆ ಜೀವಬಂದಿತ್ತು. ತಾನು ಪ್ರೀತಿಯಿಂದ ಮೆಚ್ಚಿ ಕದ್ದು ತಂದಿದ್ದ ತಿಮ್ಮಿಯೇ ತನ್ನ ಹುಲಿಯ ಹೀಗಾಗಲು ಕಾರಣ ಎಂದು ಗುತ್ತಿಗೆ ಅನ್ನಿಸಿ "ಸನಿಮುಂಡೆ ನಿನದೆಸಿಂದ ನನ್ನ ನಾಯಿನೂ ಹೋಯ್ತಲ್ಲೆ! ಯಾವ ಇಸಗಳಗೇಲಿ ಹುಟ್ಟಿದೆಯೋ ನೀನು ನನ್ನ ಹುಲಿಯನ ತಿನ್ನಕೆ' ಎಂದು ಬಯ್ದಿದ್ದ. ಮುಕುಂದಯ್ಯನಿಗೆ ಹುಲಿಯನ್ನನು ಕೊಟ್ಟು ಸಹಿಸಲಾರದೆ ಅತ್ತಿದ್ದ.

ತಿಮ್ಮಿ ಗುತ್ತಿಯೊಂದಿಗೆ ಓಡಿಹೋದ ನಂತರ ತಮ್ಮ ಗದ್ದೆಯಲ್ಲಿ ದುಡಿಯುವ ಒಂದು ಜೀತದಾಳು ಕಡಿಮೆಯಾದದ್ದಕ್ಕಾಗಿ ಕಲ್ಲೇಗೌಡರಿಗೆ ಬರಬಾರದ ಸಿಟ್ಟು ಬಂದು ಸಣ್ಣ ಬೀರನನ್ನು ಮರಕ್ಕೆ ಬಿಗಿಸಿ ಇಜಾರದ ಸಾಬಿಯಿಂದ ಹೊನ್ನಾಳ್ಳಿ ಹೊಡೆತ ಹೊಡೆಸಿದರು. ಸಣ್ಣಬೀರ ಆ ನೋವನ್ನು ಎಂದಿಗೂ ಮರೆಯಲಾರ. ಇಲ್ಲಿ ದುರಂತವೆಂದರೆ ಯಾವ ವ್ಯವಸ್ಥೆ ಸಣ್ಣಬೀರನನ್ನು ಇಂಥ ಚಿತ್ರಹಿಂಸೆಗೆ ಗುರಿಪಡಿಸಿತೋ ಅಂಥ ವ್ಯವಸ್ಥೆಯ ಮೇಲೆ ಸಿಟ್ಟುಬರದೆ ಅವನಿಗೆ ಆ ವ್ಯವಸ್ಥೆಯ ಕೈಗೊಂಬೆಯಾಗಿ ವರ್ತಿಸುವ ಇಜಾರದ ಸಾಬಿಯಮೇಲೆ ಕೋಪ ಬಂದದ್ದು. ಈ ಘಟನೆಯನ್ನು ಕುರಿತು ಡಿ.ಆರ್. ನಾಗರಾಜ ಈ ರೀತಿ ಪ್ರತಿಕ್ರಿಯಿಸುತ್ತಾರೆ. "ಇಲ್ಲಿ ಭೂಮಾಲೀಕರ ಮತ್ತು ಕೆಳವರ್ಗದವರ ನಡುವಿನ ಘರ್ಷಣೆ ಇಡೀ ಕಾದಂಬರಿಯುದ್ದಕ್ಕೂ ಒಳ ವಿದ್ಯುತ್ತಿನಂತೆ ಹರಿದಿದೆ. ಮೌನಸಂಘರ್ಷದ ಜ್ವಾಲಾಮುಖಿಗಳು ಕಾದಂಬರಿಯ ಮುಖ್ಯಸತ್ವ. ಪ್ರತಿಯೊಂದು ಘಟನೆಯೂ, ಇಲ್ಲಿ ವರ್ಗ ಸಂಬಂಧಗಳ ಹಿನ್ನೆಲೆ-ಯಲ್ಲಿಯೇ ನಡೆಯುತ್ತದೆ. ಜಮೀನುದಾರ ವರ್ಗದ ವಿವಿಧ ರೀತಯ ಹಿಂಸೆಗಳೇ ಇಲ್ಲಿಯ ಮುಖ್ಯ ಘಟನೆಗಳಿಗೆ ಕಾರಣ. ಎಲ್ಲಕ್ಕಿಂತ ಹೆಚ್ಚಾಗಿ ಇಲ್ಲಿ ಲುಂಗಿಸಾಬಿ, ಇಜಾರಸಾಬಿ, ಅಜ್ಜೀಸಾಬು ಮುಂತಾದವರ ಭೂಮಾಲೀಕವರ್ಗದ ಗೂಂಡಾ ಪಡೆಯೂ ಇದೆ. ಇವರ ವಿರುದ್ಧ ಜೀತದವರ, ಒಕ್ಕಲುಗಳ, ಕೆಳಜಾತಿಯವರ ಉಗ್ರ ಪ್ರತಿಭಟನೆಯು ಇದೆ."[೧] ಎನ್ನುತ್ತಾರೆ.

ಕರಿಮೀನು ಸಾಬರ ಕುದುರೆ ಗಂಟಿನಲ್ಲಿದ್ದ ಉಪ್ಪು ಮೀನುಗಳನ್ನು ಕದ್ದು ಕಟ್ಟಿ ಹಾಕಿದ್ದ ಕುದುರೆಯನ್ನು ಹಗ್ಗ ಕಡಿದು ಓಡಿಸಿಬಿಟ್ಟ. ಸಾಬರು ಗುತ್ತಿಯ ಗಬ್ಬದ ಆಡನ್ನು ಕುಯ್ದು ತಿಂದಾಗಲಂತೂ ಸಣ್ಣಬೀರನಿಗೆ ಪ್ರತೀಕಾರದ ಸುಸಮಯ ಒದಗಿಬಂತು. ಸಣ್ಣಬೀರ ಗುತ್ತಿಗೆ ಹೇಳಿದ 'ಅವರ ಪಚ್ಚೀನು ಹಿಂಗೆ ತೆಗೀಬೇಕು ಭಾವ, ಬಿಡಬಾರ್ದು ಇವೊತ್ತು ಏನೇ ಆಗ್ಲಿ ಥೂ' ಎಂದು ಕ್ಯಾಕರಿಸಿ ಉಗುಳಿದ. ಪರಿಣಾಮವಾಗಿ ಹೊಲೆಯರಿಗೂ ಸಾಬರಿಗೂ ಬಡಿದಾಟವಾಯಿತು. ಎರಡು ಕಡೆಯವರಿಗೂ ಗಾಯಗಳಾದವು. ಸಣ್ಣಬೀರ ಇಜಾರಸಾಬಿಯ ಬೆರಳು ಕತ್ತರಿಸಿ ಬಲವಾದ ಪೆಟ್ಟು ಕೊಟ್ಟಿದ್ದ. ಪರಿಣಾಮವಾಗಿ ಗುತ್ತಿ ದೇಶಾಂತರವಾಗಬೇಕಾಯಿತು. ಆ ಮಾತು ಇರಲಿ ಇಲ್ಲಿ ಸೇಡಿಗೆ ಸೇಡು ತೀರಿಸಿಕೊಂಡ ಸಣ್ಣಬೀರ ಪ್ರತಿಭಟನೆಯ ಸಂಕೇತವಾಗುತ್ತಾನೆ. ಪಾತ್ರ ಜೀವಂತವಾಗುತ್ತದೆ. ದಲಿತ ಪಾತ್ರಗಳು ಕೇವಲ ಹೆಂಡ, ಮಾಂಸ, ಕಾಮ

---

೧. ಡಿ.ಆರ್. ನಾಗರಾಜು, ಕುವೆಂಪು ಕಾದಂಬರಿಗಳಲ್ಲಿ ವರ್ಣ-ವರ್ಗಸಂಘರ್ಷ, ಪು. ೧೩೧, ಕುವೆಂಪು ಕಾದಂಬರಿಗಳು (ಸಂ) ಗುರುಪಾದಪ್ಪ ಬೆಂಗಳೂರು, ೨೦೦೪.

ಇತ್ಯಾದಿ ಮಣ್ಣಿನ ಸ್ಥರದಲ್ಲಿಯೇ ಬದುಕಿ ಪ್ರತಿಭಟಿಸದೇ, ಘರ್ಷಿಸದೆ, ಅರ್ಥೈಸಿಕೊಳ್ಳದೆ ಹೋಗುತ್ತವೆ."

ಕುವೆಂಪುರವರು ಶೋಷಣೆಯ ಎಲ್ಲಾ ಮುಖಗಳನ್ನು ಪರಿಚಯ ಮಾಡಿಕೊಡುತ್ತಾರೆ. ಅವರು ಆ ವರ್ಗ ಈ ವರ್ಗ ಎಂಬ ಭೇದಭಾವ ತೋರದೆ ಎಲ್ಲ ವರ್ಗಗಳಲ್ಲೂ ವರ್ಗ ಶೋಷಣೆಯಿರುವುದನ್ನು ಗುರುತಿಸುತ್ತಾರೆ. ಅಂತಹ ಶೋಷಕ ಪಾತ್ರಗಳಲ್ಲಿ ಕಾನೂರು ಹೆಗ್ಗಡತಿಯಲ್ಲಿ ಬರುವ ಕೆಳ ಕಾನೂರಿನ ಅಣ್ಣಯ್ಯಗೌಡರ ಪಾತ್ರವು ಒಂದಾಗಿದೆ. "ಅಣ್ಣಯ್ಯಗೌಡರು ತಮ್ಮ ವಯಸ್ಸಿಗಿಂತಲೂ ಹೆಚ್ಚಾಗಿ ಮುದುಕರಾಗಿದ್ದರು ಬಟ್ಟೆಯೊಗೆಯದೆ ಎಷ್ಟು ವರ್ಷಗಳಾಗಿದ್ದವೋ.... ಷರ್ಟು ಅವರ ಭಾಗಕ್ಕೆ ಮೊಲದ ಕೊಂಬಾಗಿತ್ತು ಅದರಿಂದ ಬಿಳಿಯ ಕೂದಲು ತುಂಬಿದ್ದ ಅವರ ಎದೆಯೂ ಸುಕ್ಕು ಸುಕ್ಕಾಗಿದ್ದ ಹೊಟ್ಟೆಯೂ ಕನಿಕರ ಹುಟ್ಟುವಂತೆ ಕಾಣುತ್ತಿದ್ದವು. ಅರವತ್ತು ಎಪ್ಪತ್ತು ಬೇಸಗೆಗಳ ಬಿಸಿಲಿನಲ್ಲಿ ಸುಟ್ಟು ಸುಟ್ಟು ಕಪ್ಪಾಗಿದ್ದ ಅವರ ಮುಖ ಚರ್ಮದ ಹಿಂದೆ ಗಲ್ಲ ಕೆನ್ನೆ ಮತ್ತು ತಲೆಯ ಎಲುಬುಗಳೂ ನರಗಳೂ ಚಾಚಿಕೊಂಡಿದ್ದುವು.... ಅವರು ಮಾತಾಡಿದರೆ ಹಸುಳೆಯ ತೊದಲೂ ಧ್ವನಿಯಲ್ಲಿ ಇಂಕಾರ ಪ್ರಾಧಾನ್ಯವೂ ಕಂಡುಬರುತ್ತಿತ್ತು."[೧] ಸಂಸಾರದ ತಾಪತ್ರಯದಲ್ಲಿ ಬೆಂದು ಬಸವಳಿದಿದ್ದ ಲೋಕದ ಗೋಳೇ ಮೂರ್ತಿವೆತ್ತಂತಿದ್ದ ಅಣ್ಣಯ್ಯಗೌಡರ ಚಿತ್ರವನ್ನು ಕಾದಂಬರಿಕಾರರು ಬಣ್ಣ ಬಣ್ಣದ ಕುಂಚದಿಂದ ಬಿಡಿಸಿದಂತಿದೆ.

**ಜಮೀನ್ದಾರಿ ಮತ್ತು ಶೋಷಣೆ**

ದೊಡ್ಡ ಬೀರ ಊರಿನ ತಳವಾರ. ದರ್ಪದ ಮನುಷ್ಯ, ಸೈಕಲ್ ಎಳೆಯಲು ಹೋಗಿ ಬಿದ್ದು ಕಾಲಿಗೆ ಏಟು ಮಾಡಿಕೊಂಡು ಬಂದು ಜಗುಲಿಯ ಮೇಲೆ ಮಲಗಿದ್ದಾನೆ. ದೇವಯ್ಯನಿಗೆ ಸೈಕಲ್ ಕಲಿಸುವಾಗ ದೊಡ್ಡ ಬೀರ ಮತ್ತು ಬಚ್ಚರು ಎತ್ತಿನ ಗಾಡಿಯಥರ ಮಾಡಿದ ನೊಗಕ್ಕೆ ಹೆಗಲು ಕೊಟ್ಟು ತಿರುಗುವ ಪ್ರಸಂಗ ಜೀತದ ಹಾಗೂ ಶೋಷಣೆಯ ಕ್ರೌರ್ಯದ ಪರಮಾವಧಿ ಎಷ್ಟು ಭೀಕರ ಎಂಬುದನ್ನು ನೋಡಬಹುದು. ಆಮೇಲೆ ಆತನ ಗಂಡು ಮಕ್ಕಳು ಓಡಿಹೋದ ತಂಗಿಯನ್ನು ಊರುಸುತ್ತ ಹುಡುಕುತ್ತಾರೆ. ಕೊನೆಗೆ ಕಲ್ಲಯ್ಯಗೌಡರು ಸಿಟ್ಟುಗೊಳ್ಳುತ್ತಾರೆ, ತಮ್ಮ ಮನೆಯ ಒಂದು ಜೀತದ ಹೆಣ್ಣಾಳು ಊರು ಬಿಟ್ಟು ಹೋದಳಲ್ಲ ಎಂದು ಅವರಿಗೆ ಸಿಟ್ಟು. ಅದಕ್ಕೆ ಅವರು ಸಾಬರನ್ನು ಕರೆಯಿಸಿ ದೊಡ್ಡಬೀರನನ್ನು ವಿಚಾರಿಸಲು

---

೧. ದೇಜಗೌ, ಕುವೆಂಪು ಕಥನ ಶೈಲಿ ಪು. ೧೪೧, ಕುವೆಂಪು ಕಾದಂಬರಿಗಳು (ಸಂ) ಗುರುತಿಸಿದ ಕುರಿಗುದ್ದಿ, ೨೦೦೪.

ಆಜ್ಞೆಮಾಡುತ್ತಾರೆ. ಸೇಸಿ ಹೇಳುವ ಹಾಗೆ 'ಗೌಡರ ಕೋಪ' ಇಲ್ಲಿ ಪ್ರಕಟವಾಗುತ್ತದೆ. ಮೊದಲು ದೊಡ್ಡ ಬೀರನ ಮಗ ಸಣ್ಣ ಬೀರನನ್ನು ಕರೆಸಿ ಬಟ್ಟೆ ಬಿಚ್ಚಿಸಿ ಕಂಬಕ್ಕೆ ಕಟ್ಟುತ್ತಾರೆ. ಅವನಿಗೆ ಸಾಬಿ ಹಸಿ ಹುಣಿಸೆ ಚಬ್ಬೆಯಿಂದ ಹೊಡೆಯುತ್ತಾನೆ. ಈ ಸನ್ನಿವೇಶ ಕಾದಂಬರಿಯಲ್ಲಿ ಹೃದಯವಿದ್ರಾವಕವಾಗಿ ಚಿತ್ರಿತವಾಗಿದೆ. ವಂಶ ಪಾರಂಪರ್ಯವಾಗಿ ನಡೆದು ಬಂದ ದಲಿತರ ಶೋಷಣೆಗೆ, ಕ್ರೌರ್ಯಕ್ಕೆ ಇದು ಸಾಕ್ಷಿಯಾಗಿದೆ. ಕ್ರೌರ್ಯ ಇಲ್ಲಿ ಉತ್ಕರ್ಷ ಸ್ಥಿತಿಮುಟ್ಟಿದೆ.

ಇಂತಹ ಸಂದರ್ಭಗಳಲ್ಲಿ ಮಲೆನಾಡಿನಲ್ಲಿ ಎಷ್ಟೋ ಜನ ದಲಿತರು ಪ್ರಾಣ ಬಿಟ್ಟಿದ್ದಕ್ಕೆ ಉದಾಹರಣೆಗಳಿವೆ ಎಂದು ವರ್ಣಿಸುತ್ತಾರೆ ಕಾದಂಬರಿಕಾರರು. ದಣಿ, ಆಳು, ಒಡೆಯ, ಜೀತ, ಬೇಟೆ-ಬೇಟೆಗಾರ ಈ ಸಂಬಂಧಗಳು ಬೇರ್ಪಡಿಸಲಾರದಂತಹ ಒಂದು ಅಲಿಖಿತ ಒಪ್ಪಿತ ಸಂಬಂಧವೇನೋ ಎಂಬಂತೆ ಕಥೆಯಲ್ಲಿ ಇದು ನಿರಂತರವಾಗಿ ನಡೆದುಕೊಂಡು ಬಂದಿದೆ. ಇವೆರಡೂ ಬೇರ್ಪಟ್ಟು ಬಿಟ್ಟರೆ ವಿಕೃತಿ ಸ್ಥಿತಿ ಬಂದುಬಿಡುತ್ತದೆಂಬ ನಂಬಿಕೆ ಆ ಸಮಾಜದಲ್ಲಿ ಗಾಢವಾಗಿ ಬೇರುಬಿಟ್ಟಂತಿದೆ. ಸಣ್ಣಬೀರನಿಗೆ ಮೈಯೆಲ್ಲಾ ಬಾಸುಂಡೆ ಬರುವ ತನಕ, ರಕ್ತ ಬರುವ ತನಕ ಸಾಬಿ ಹೊಡೆಯುತ್ತಾನೆ. ಕಲ್ಲಯ್ಯ ಗೌಡರು ನೋಡುತ್ತಾ ಅಲ್ಲೇ ಮೌನವಾಗಿ ಕೂತಿರುತ್ತಾನೆ. ಒಮ್ಮೆ ಹೊಲಗೇರಿಗೆ ಚರ್ಮ ಕೊಂಡೊಯ್ಯಲು ಬಂದಾಗ ತಳವಾರ ದೊಡ್ಡಬೀರ 'ನಮ್ಮ ಕೇರಿಗೆ ಬಂದು ನೀನು ಜಾತಿ ಕೆಡಿಸಬೇಡ' ಎಂದು ಸಿಟ್ಟಿನಿಂದ ಹೇಳಿ ಈ ಸಾಬಿಗೆ ಹಂಗಿಸಿದ್ದು ಈಗ ಅವನಿಗೆ ನೆನಪಾಗಿ ಆತ ಸೇಡು ತೀರಿಸಿಕೊಳ್ಳಲು ಇಲ್ಲಿ ಸನ್ನದ್ಧನಾಗುತ್ತಾನೆ. ಈ ಸನ್ನವೇಶವನ್ನು ಕಾದಂಬರಿ ಹೀಗೆ ವ್ಯಾಖ್ಯಾನಿಸುತ್ತದೆ. "ಯಾಕೋ ಕಾಲು ನಡುಗಿಸ್ತಾ ನಿಂತಿಯಾ? ನೀನಾದರೂ ನಿಜ ಹೇಳೋ, ನಿನ್ನ ತಂಗೀನ ಎಲ್ಲಿ ಮುಚ್ಚಿಟ್ಟಿದ್ದೀರೋ? ಎಲ್ಲಿಗೆ ಕಳ್ಸಿದ್ದೀರೋ?" ಮಿಳ್ಮಳನೆ ಮಾತು ಹೊರಡದೆ ಕಣ್ಣು ಬಿಡುತ್ತಿದ್ದ ಸಣ್ಣಬೀರನನ್ನು ನಿರ್ದೇಶಿಸಿ ಲುಂಗೀ ಸಾಬು ಕೇಳಿ ಮತ್ತೆ ಎಚ್ಚರಿಕೆ ಹೇಳಿದ್ದು, "ಹೇಳುತ್ತಿದ್ದರೆ ಒಳ್ಳೆ ಮಾತಿನಲ್ಲಿ ಹೇಳು, ಇಲ್ಲದಿದ್ದರೆ ನಿನಗೆ ಗೊತ್ತೆ ಇದೆಯಲ್ಲಾ ಕಂಬಕ್ಕೆ ಕಟ್ಟಿ ಬಾಯಿ ಬಿಡಿಸುತ್ತಾರೆ."

ಸಣ್ಣಬೀರ ನಡುಕ ದನಿಯಲ್ಲಿ ಕೈ ಕೈ ಮುಗಿಯುತ್ತಾ "ಅಯ್ಯಾ ನಿಮ್ಮ ಉಪ್ಪು ಅನ್ನ ತಿಂದು ನಿಮಗೆ ನಾ ಸುಳ್ಳು ಹೇಳಲಾರೆ. ಧರ್ಮಸ್ಥಳದ ದೇವ್ರಾಣೆಗೂ ನಂಗೊತ್ತಿಲ್ಲ....." ಅವನಿನ್ನೂ ಹೇಳಿ ಮುಗಿಸಿರಲಿಲ್ಲ ಗೌಡರು ಲುಂಗಿ ಸಾಬುವನ್ನು ಕುರಿತು "ಹೋಗೋ ಬುಡನ್ ಒಂದಿಷ್ಟು ಹುಣಸೇ ಬರಲು ಮುರುಕೊಂಡು ಬಾರೋ" ಎಂದು ಇಜಾರದ ಸಾಬಿಯ ಕಡೆ ನೋಡಿ "ಏನೋ ನೋಡ್ತಿಯಾ! ಕಟ್ಟೋ ಅವನನ್ನು ಕಂಬಕ್ಕೆ!" ಎಂದು ಕಠಿಣ ಧ್ವನಿಯಲ್ಲಿ ಆಜ್ಞಾಪಿಸಿದರು.

"ಸಣ್ಣ ಬೀರನೇ ಹೋಗಿ ಕಂಬವನ್ನು ತಬ್ಬಿ ನಿಲ್ಲುತ್ತಾನೆ. ಅವನ ಎರಡೂ ಕೈಗಳನ್ನೂ ಜೋಡಿಸಿ ಹಗ್ಗ ಬಿಗಿಯುತ್ತಾರೆ. ಆಗ ಯುವ ಸ್ತಂಭಕ್ಕೆ ಬಲಿ ಕಟ್ಟಿಸಿಕೊಳ್ಳುವ ಯಜ್ಞವಿಧಾನ ಸಣ್ಣಬೀರನಿಗೆ ಮತ್ತು ಅವನಂತಹ ದಲಿತ ಸಮುದಾಯದ ಅನೇಕ ಜನಕ್ಕೆ ಚಿರಪರಿಚತವಾಗಿತ್ತು. ಅವನಿಗೆ ಇದು ಹೊಸದಾಗಿರಲಿಲ್ಲ. ಆತ ಪ್ರತಿಭಟಿಸಿದರೆ ತಾನೇ ತನ್ನ ಪ್ರಾಣಕ್ಕೆ ಸಂಚಕಾರ ತಂದುಕೊಳ್ಳುತ್ತೇನೆ ಎಂಬುದು ಅವನಿಗೆ ಗೊತ್ತಿದ್ದರಿಂದ ಏನೂ ಪ್ರತಿಭಟಿಸದೆ ಕಂಬಕ್ಕೆ ಒರಗಿ ನಿಂತೂ ಶಿಕ್ಷೆ ಅನುಭವಿಸತೊಡಗಿದ್ದ. ಲುಂಗೀಸಾಬು ತಂದು ಒಟ್ಟಿದ ಹುಣಸೆ ಬರಲುಗಳಲ್ಲಿ ಇಜಾರದ ಸಾಬಿ ಒಂದನ್ನು ತಜ್ಞನಂತೆ ಪರಿಶೀಲಿಸಿ ಆರಿಸಿಕೊಂಡು ಸಣ್ಣಬೀರನ ಬತ್ತಲೆಯ ಬೆನ್ನ ಮೇಲೆ ಬೀಸತೊಡಗಿದ. ಆಗ ಸಣ್ಣಬೀರ ಚಿಟಾರನೆ ಚೀರುತ್ತಾ 'ದಮ್ಮಯ್ಯ ಸಾಬ್ರೆ, ಹೊಡಿಬ್ಯಾಡಿ ನಾ ಸಾಯ್ತಿನಿ, ನನ್ನ ಹೆಂಡ್ರು ಮಕ್ಕಳ ಬಾಯ್ಗೆ ಮಣ್ಣು ಹಾಕಬೇಡಿ."[೧] ಎನ್ನುವಲ್ಲಿ ಶೋಷಣೆಯನ್ನು ಕಾಣಬಹುದಾಗಿದೆ. ಕರೀಗೌಡ ಬೀಚನಹಳ್ಳಿಯವರು ಹೀಗೆ ಪ್ರತಿಕ್ರಿಯಿಸುತ್ತಾರೆ. "ಮಲೆಗಳಲ್ಲಿ ಮದುಮಗಳು ಕಾದಂಬರಿಯಲ್ಲಿ ದಲಿತ ಲೋಕದ ದಟ್ಟವಾದ ಸಂವೇದನೆ ಢಾಳಾಗಿ ಹುದುಗಿದೆ. ಮುಖ್ಯವಾಗಿ ಈ ದಲಿತ ಕಥನದ ವಾರಸುದಾರರು ಗುತ್ತಿ, ತಿಮ್ಮಿ ಮತ್ತು ಸೇಸಿ. ಈ ಸೇಸಿಯ ಕುಟುಂಬವನ್ನು ಕುವೆಂಪು ಅವರು ವಾಸ್ತವತೆ ಮತ್ತು ಮಾನವೀಯತೆ ಎರಡನ್ನು ಬೆರೆಸಿ ಒಂದು ಹೃದಯ ವಿದ್ರಾವಕವಾದ ಸಂಕಥನವೊಂದನ್ನಾಗಿ ರೂಪಿಸಿದ್ದಾರೆ. ದಲಿತ ಸಾಹಿತ್ಯದ ನೋವಿನ ಅನನ್ಯತೆಯನ್ನು, ಅದರ ಶೋಷಣೆಯ ಪರಂಪರೆಯನ್ನು ಅದರ ಅಸ್ಪೃಶ್ಯತೆಯ ಇತಿಹಾಸವನ್ನು ಅವರ ಮತಾಂತರ ಪ್ರಕ್ರಿಯೆಯನ್ನು ಅಧ್ಯಯನ ಮಾಡಲು ಹೊರಟವರು. ಈ ಕಥಾನಕವನ್ನು ಗಮನಿಸದೆ ದಲಿತ ಸಾಹಿತ್ಯದ ಚರಿತ್ರೆಯನ್ನು ಬರೆಯುವಂತೆ ಇಲ್ಲ."[೨] ಎನ್ನುತ್ತಾರೆ.

ಜೀತ ಪದ್ಧತಿಯು ವರ್ಗಹಿಂಸೆಯ ಹೃದಯ ವಿದ್ರಾವಕ ಸಂಗತಿ. ಊಳಿಗಮಾನ್ಯ ವ್ಯವಸ್ಥೆಯೊಳಗೆ ಅಶಾಂತಿ, ಮೌನ ಸಂಘರ್ಷದ ಜ್ವಾಲಾಮುಖಿಗಳು ಒಳಗೊಳಗೇ ಕುದ್ದು ಆವಿಯಾಗಿ ಬಿಡುತ್ತವೆ. ವರ್ಗಪ್ರಜ್ಞೆಯ ಊಳಿಗಮಾನ್ಯ ವ್ಯವಸ್ಥೆಯನ್ನು ಅಲ್ಲಿನ ಶೋಷಣೆಯ ಸ್ವರೂಪವನ್ನು ಬಂಡವಾಳ ಶಾಹಿಗಳ

---

೧. ಕರೀಗೌಡ ಬೀಚನಹಳ್ಳಿ (ಡಾ) ಕುವೆಂಪು ಮತ್ತು ದಲಿತ ಸಂವೇದನೆ, ಅನಿಕೇತನ, ಬೆಂಗಳೂರು, ೨೦೦೫, ಪು. ೬೭.

೨. ಕರೀಗೌಡ ಬೀಚನಹಳ್ಳಿ, ಕುವೆಂಪು ಮತ್ತು ದಲಿತ ಸಂವೇದನೆ, ಅನಿಕೇತನ, ೨೦೦೫, ಪು. ೬೫೨.

ಪಾಳೆಯಗಾರಿ ಮನೋಭಾವವನ್ನು ಕುವೆಂಪು ತಮ್ಮ ಎರಡೂ ಕಾದಂಬರಿಗಳಲ್ಲಿ ಸಮರ್ಥವಾಗಿ ಅಭಿವ್ಯಕ್ತಿಸಿದ್ದಾರೆ. ವರ್ಗ ಸಂಘರ್ಷದಲ್ಲಿ ಆರ್ಥಿಕ ಅಸಮಾನತೆ ಮುಖ್ಯವಾಗಿರುತ್ತದೆಯೇ ಹೊರತು ಜಾತಿ ನೆರವಿಗೆ ಬರುವುದಿಲ್ಲ. ಶೂದ್ರ ಶೂದ್ರನನ್ನು ಶೋಷಿಸುವುದು, ಬ್ರಾಹ್ಮಣ ಬ್ರಾಹ್ಮಣನನ್ನು ಶೋಷಿಸುವುದು ಬಡವ ಶ್ರೀಮಂತರ ಪರಿಕಲ್ಪನೆಗಳಲ್ಲಿಯೇ ಹೊರತು ಜಾತಿಯಿಂದಲ್ಲ.

# ಅಧ್ಯಾಯ - ೪

# ಕುವೆಂಪು ಕಾದಂಬರಿಗಳಲ್ಲಿ ಸ್ತ್ರೀಯರ ಸ್ಥಾನಮಾನ

ಮಹಿಳೆ ಹಾಸ್ಯದ ನೊಗ ಹೇರಿಕೊಂಡ ಮೊಟ್ಟಮೊದಲ ಮಾನವಜೀವಿ ಎಂಬುದನ್ನು ಚರಿತ್ರೆ ನಮಗೆ ಆಧಾರವಾಗಿಸುತ್ತದೆ. ಭಾರತೀಯ ಸಂಸ್ಕೃತಿ ಮತ್ತು ಸಾಹಿತ್ಯದಲ್ಲಿ ಪರಂಪರಾಗತವಾಗಿ ಮಹಿಳೆಯರ ಬದುಕಿನ ನಿರ್ದೇಶನ ಪುರುಷಾಧೀನಗೊಂಡಿರುವುದರ ಹಿಂದೆ ಹಲವಾರು ಒತ್ತಡಗಳಿವೆ. ಸ್ತ್ರೀಯರ ಬದುಕಿನ ಬಗೆಗೆ ಅಧ್ಯಯನಕ್ಕೆ ತೊಡಗಿದಾಗ ಆಕೆಯ ಸ್ಥಾನಮಾನ ವಿವಿಧ ಅವಸ್ಥೆಗಳನ್ನು ಮನುಕುಲದ ಚರಿತ್ರೆಯ ಬೆಳವಣಿಗೆಯ ಪದರು ಪದರುಗಳನ್ನು ಬಿಚ್ಚುತ್ತಲೆ ನಿಚ್ಚಳವಾಗಿ ಕಾಣಬೇಕಾಗಿದೆ. ಆದಿಮ ಜನಾಂಗದ ಪ್ರಾರಂಭಿಕ? ಹಂತದಲ್ಲಿ ಈ ಅಸಮಾನತೆ ಕಾಣಿಸುವುದಿಲ್ಲ. ಮಾತೃ ಪ್ರಧಾನ ಸಮಾಜ ವ್ಯವಸ್ಥೆಯ ಸಂದರ್ಭದಲ್ಲಿ ಹೆಣ್ಣಿನ ಸ್ಥಾನ ಉನ್ನತವಾಗಿಯೇ ಇತ್ತು ಎನ್ನುವುದಕ್ಕೆ ಚರಿತ್ರೆ ಸಾಕ್ಷಿಗಳನ್ನು ಒದಗಿಸುತ್ತದೆ. ಕೈಯಲ್ಲಿ ಆಯುಧ ಹಿಡಿದು ಬೇಟೆಯಾಡಿ ಸ್ವಾವಲಂಬಿ, ಸ್ವಾಭಿಮಾನದ, ಸ್ವಾತಂತ್ರ್ಯ ಜೀವನ ಕಳೆದ ಮಹಿಳೆ ನಂತರದ ಅವಧಿಯಲ್ಲಿ ಪರಾಧೀನತೆಗೆ ಒಳಪಟ್ಟಿದ್ದರ ಹಿಂದಿರುವ ಸಂಚನ್ನು ಗಂಭೀರವಾಗಿ ಗುರುತಿಸುವುದಾಗಿರಬೇಕು. ಪೂರ್ವ ಕಾಲದ ಮಹಿಳೆಯರ ಕುರಿತು ಸರೋಜಿನಿ ಶಿಂತ್ರಿಯವರು "ಆರ್ಯ ಸಂಸ್ಕೃತಿಯ ಪೂರ್ವ ಕಾಲದಲ್ಲಿ ಸ್ತ್ರೀಯರು ಸ್ವತಂತ್ರವಾಗಿ ವ್ಯವಹರಿಸುತ್ತಿದ್ದರೆಂದೆ ಹೇಳಬಹುದು. ಅವರ ಮೇಲೆ ವಿಶೇಷವಾದ ಯಾವ ಕಟ್ಟುನಿಟ್ಟುಗಳು ಇರಲಿಲ್ಲ. ನೀತಿಯ ವಿಷಯವಾಗಿ ಅವರಿಗೆ ವಿಪರೀತ ಭಾವನೆ ಇದ್ದಿರಲಿಲ್ಲ. ದಕ್ಷಿಣ ಹಿಂದೂ ಸ್ಥಾನದಲ್ಲಿ ದ್ರಾವಿಡರ ಸಂಸ್ಕೃತಿಯವರೆಂದು ಹೇಳಿಕೊಳ್ಳುವ ಕೆಲವು ಸಮಾಜಗಳಲ್ಲಿ ಈ ತರಹದ ನೀತಿ-ನಡುವಳಿಕೆಗಳು ಇದ್ದುದನ್ನು ನಾವು ಕಾಣುತ್ತೇವೆ"[೧] ಎನ್ನುತ್ತಾರೆ. "ಭಾರತೀಯ ಸಮಾಜದಲ್ಲಿ ಶೂದ್ರವರ್ಗದ ನೆಲೆಯಲ್ಲಿಯೆ ಹೆಣ್ಣು ಇರುವುದರಿಂದ ಶೂದ್ರವರ್ಗದ ಬಿಡುಗಡೆಯೊಂದಿಗೆ ಸ್ತ್ರೀ ಬಿಡುಗಡೆಯ ಉದ್ಧಾರವಿದೆ ಎಂಬುದನ್ನು ನಿಖರವಾಗಿ ಗ್ರಹಿಸಿದ್ದ ಕುವೆಂಪು ರೈತನನ್ನು ನೇಗಿಲಯೋಗಿ ಎಂದು ಕರೆದು ಉನ್ನತಿಗೇರಿಸಿದಂತೆ ಹೆಣ್ಣನ್ನು ಮನೆಮನೆಯ ತಪಸ್ವಿನಿ ಎಂದು ಕರೆದು ಗೌರವ ಘನತೆಯನ್ನು ತಂದುಕೊಟ್ಟರು"[೨] ಎಂದು ಚಕ್ಕೆರೆ ಶಿವಶಂಕರ್ ಕುವೆಂಪು ಕಾದಂಬರಿಗಳ ಸ್ತ್ರೀಯರನ್ನು

---

೧.. ಸರೋಜಿನಿ ಶಿಂತ್ರಿ(ಡಾ) ಮಹಿಳೆ ನಡೆದು ಬಂದ ದಾರಿ, ಪು. ೧೧, ಆರ್ಯ ಸಂಸ್ಕೃತಿಯ ಪೂರ್ವ ಕಾಲದಲ್ಲಿ ಮಹಿಳೆಯರು, ೧೯೯೨.

೨. ಚಕ್ಕೆರೆ ಶಿವಶಂಕರ್ (ಡಾ) ಕುವೆಂಪು ಕಾದಂಬರಿಗಳ ಸ್ತ್ರೀ ಸಂವೇದನೆ, ಪು. ೨೭೨. ಸಹ್ಯಾದ್ರಿಯ ಸೂರ್ಯ, ಕಸಾಅ, ಬೆಂಗಳೂರು, ೨೦೧೦.

ಕುರಿತು ಪ್ರತಿಕ್ರಿಯಿಸುತ್ತಾರೆ. ಮುಂದುವರಿದು ವೈಚಾರಿಕ ಹಿನ್ನೆಲೆಯೊಂದಿಗೆ ಅತ್ಯಂತ ಅರ್ಥಪೂರ್ಣವಾಗಿ, ಆರೋಗ್ಯಕರ ನೆಲೆಯಲ್ಲಿ ಮಹಿಳೆಯ ಬಗ್ಗೆ ಮಾತನಾಡಿದರು. ಈ ಮಾತುಗಳು ಮಾನವೀಯ ನೆಲೆಯಲ್ಲಿ ಎಷ್ಟರಮಟ್ಟಿಗೆ ಬೆಂಬಲ, ಸಮರ್ಥನೆ, ಸಹಾನುಭೂತಿ, ಅನುಕಂಪಗಳನ್ನು ಅಭಿವ್ಯಕ್ತಿಸಿವೆ ಎಂಬುದನ್ನು ಅವರ 'ಕಾನೂರು ಹೆಗ್ಗಡತಿ' ಮತ್ತು 'ಮಲೆಗಳಲ್ಲಿ ಮದುಮಗಳು' ಕಾದಂಬರಿಗಳಲ್ಲಿ ತಿಳಿಸಿಕೊಡುತ್ತವೆ"[೧]ಎಂದಿದ್ದಾರೆ.

ಕುವೆಂಪು ಸೃಷ್ಟಿಸಿರುವ ಸ್ತ್ರೀ ಪಾತ್ರಗಳೆಲ್ಲವೂ ಚಲಿಸುವ ಪಾತ್ರಗಳು. ಚಲನೆಯೊಂದಿಗೆ ಮುಕ್ತಾಯಗೊಳ್ಳುತ್ತದೆ. ಹೆಣ್ಣು ಸಾಮಾಜಿಕ ಬದುಕಿಗೆ ನೆಲೆ ಒದಗಿಸಿದವಳು. ಇಲ್ಲಿ ಹೆಣ್ಣು 'Certain' ಗಂಡು 'UnCertain'. ಹೆಣ್ಣಿನ ಮೂಲಕ ಸಮಾಜದ ಚಲನೆಯನ್ನು ಕಂಡಿರಿಸಿದ್ದಾರೆ. ಇಂತಹ ಹೆಣ್ಣಿಗಾಗಿ ಗಂಡುಗಳ ಪಯಣ, ನಿಸರ್ಗ–ಹೆಣ್ಣು– ಭೂಮಿಯ ಹುಡುಕಾಟವು ಎರಡೂ ಕಾದಂಬರಿಗಳ ಆಶಯವಾಗಿದ್ದು, Fudalismನ ಸ್ಥಗಿತತೆಯನ್ನು ಒಡೆಯುವ ಹುನ್ನಾರ ನಡೆಸಿದ್ದಾರೆ.

ಕಾನೂರಿನ ನಾಗಮ್ಮ, ಮುತ್ತಳ್ಳಿಯ ಗೌರಮ್ಮ, ಸೀತೆಮನೆ ಸಿಂಗಪ್ಪಗೌಡರ ಪತ್ನಿ, ಕೆಳಕಾನೂರು ಅಣ್ಣಯ್ಯಗೌಡರ ಪತ್ನಿ, ಸಿಂಬಾವಿಭರಮ್ಮೈ ಹೆಗ್ಗಡೆಯವರ ಪತ್ನಿ ಜಟ್ಟಮ್ಮ, ಹಳೆಮನೆ ರಂಗಮ್ಮ, ಬೆಟ್ಟಳ್ಳಿ ದೇವಯ್ಯಗೌಡರ ಹೆಂಡತಿ ಬೆಟ್ಟಮ್ಮ ಮುಂತಾದವರು ವಯಸ್ಸು ಜೀತನಾನುಭವಗಳ ದೃಷ್ಟಿಯಿಂದ ಮಾಗಿದವರು. ಸುಸಂಸ್ಕೃತ ವ್ಯಕ್ತಿಗಳಾದರೂ ಸಾಂಪ್ರದಾಯಿಕತೆಗೆ ಶರಣಾದ ಮನಸ್ಸುಗಳು. ಊಳಿಗಮಾನ್ಯ ಕುಟುಂಬ ವ್ಯವಸ್ಥೆಯಲ್ಲಿ ಕೌಟುಂಬಿಕ ಚೌಕಟ್ಟಿನಲ್ಲಿ ಗಂಡಂದಿರನ್ನು ತಿದ್ದಲು ಯತ್ನಿಸಿದವರು. ಆದರೆ ಸಂಪ್ರದಾಯವನ್ನು ರೂಢಿಗತ ಕಟ್ಟುಪಾಡುಗಳನ್ನು ಅತ್ತ ಅನುಸರಿಸಿಲ್ಲ. ಆದರೆ ಇತ್ತ ಬಿಡಲು ಆಗದೆ, ಹಳೆಯದಕ್ಕೆ ತಾವು ನಿಂತನೆಲೆಯಲ್ಲಿಯೆ ತಮ್ಮ ಅಸ್ತಿತ್ವ ಮತ್ತು ಸಂಸ್ಕೃತಿಯನ್ನು ಕಾಯ್ದುಕೊಂಡು ಬಂದ ಸುಸಂಸ್ಕೃತರು. ಬದುಕಿನಲ್ಲಿ ಸಂಘರ್ಷಕ್ಕಿಂತಲೂ ಹೆಚ್ಚಾಗಿ ಸೌಹಾರ್ದತೆಯ ಪರವಾಗಿ ನಿಂತಿದ್ದರಿಂದ ಇವರೆಲ್ಲರ ಬದುಕಿನ ನಂಬಿಕೆಗಳು ಕಾದಂಬರಿಯಲ್ಲಿ ಗಟ್ಟಿಯಾಗುತ್ತ ಹೋಗುವುದು ಗೋಚರಿಸುತ್ತದೆ. ಇದರ ಮಧ್ಯೆಯೂ ಊಳಿಗಮಾನ್ಯ ಕ್ರೌರ್ಯಗಳಿಗೆ ತುತ್ತಾದವರು ತಿರುಗಿಬಿದ್ದು ಪ್ರಶ್ನಿಸಬಲ್ಲ ಎದೆಗಾರಿಕೆಯನ್ನು ತೋರಿದ್ದಾರೆ. ಆತ್ಮಗೌರವದ ಬದುಕಿನೆಡೆಗೆ ಮುಖ ಮಾಡಿದ್ದಾರೆ. ಉಕ್ಕಿನಕೋಟೆಯ ಒಳಗಿದ್ದು ಸ್ಫೋಟಿಸುವ ನಾಗಮ್ಮ, ಗಂಡಸರ ಎದುರು ನಿಂತು ಮಾತನಾಡಕೂಡದು ಎನ್ನುತ ಅಲಿಖಿತ ಕಾನೂನುಗಳನ್ನು

---

೧. ಚಕ್ಕೆರೆ ಶಿವಶಂಕರ್ (ಡಾ) ಕುವೆಂಪು ಕಾದಂಬರಿಗಳ ಸ್ತ್ರೀ ಸಂವೇದನೆ, ಪು. ೨೬೨, ಸಹ್ಯಾದ್ರಿಯ ಸೂರ್ಯ, ಕಸಾಅ, ಬೆಂಗಳೂರು- ೨೬೨.

ಮುರಿಯುತ್ತಾರೆ. ಚಂದ್ರಯ್ಯಗೌಡರ ಕೌಟುಂಬಿಕ ಕ್ರೌರ್ಯದಲ್ಲಿ ನಲುಗಿದ ನಾಗಮ್ಮ ತನ್ನ ಗಂಡನ ಸಾವಿಗೆ ಚಂದ್ರಯ್ಯಗೌಡರೇ ಕಾರಣವೆಂದು ಹರಿಹಾಯುತ್ತಲೇ ಚಂದ್ರಯ್ಯಗೌಡರ ದಬ್ಬಾಳಿಕೆ, ದೌರ್ಜನ್ಯಗಳನ್ನು ಪ್ರತಿಭಟಿಸಿ ತನ್ನ ಪಾಲಿನ ಆಸ್ತಿಯಲ್ಲಿ ಪಾಲು ಪಡೆದ ದಿಟ್ಟೆ.

ಡಾ. ಬಿ.ಎನ್. ಸುಮಿತ್ರಬಾಯಿಯವರು ಕುವೆಂಪು ಕಾದಂಬರಿಗಳನ್ನು ಕುರಿತು ಈ ರೀತಿ ಪ್ರತಿಕ್ರಿಯಿಸುತ್ತಾರೆ. ಕಾನೂರು ಹೆಗ್ಗಡತಿ, ಮತ್ತು ಮಲೆಯಲ್ಲಿ ಮದುಮಗಳು ಎರಡು ಕಾದಂಬರಿಗಳೂ ಸ್ತ್ರೀಯಾತ್ಮಕ ನೆಲೆಗಟ್ಟನ್ನು ಸೂಚಿಸುವಂತವಾಗಿವೆ. ಹೆಣ್ಣಿನ ಪರಂಪರಾಗತವಾದ ಕೌಟುಂಬಿಕ ನೆಲೆಯನ್ನು 'ಮದುಮಗಳು' ಎಂಬುದು ಸೂಚಿಸುತ್ತದೆ. ಈ ರೂಢಿಗತ ಅಧೀನ ನೆಲೆಯನ್ನು 'ಹೆಗ್ಗಡತಿ' ಎಂಬುದು ಧ್ವನಿಸುವಂತಿದೆ. ಅಧೀನತೆಯ ನೆಲೆಯಿಂದ ಅಧಿಕಾರದ ನೆಲೆಯತ್ತ ಸಾಗುವ ಸಾಂಸ್ಕೃತಿಕ ಪ್ರಕ್ರಿಯೆ ಒಂದಾದರೆ, ಅಧೀನತೆಯಿಂದ ಸಮಾನತೆಯತ್ತ ಬೆಳೆಯುವಂತದ್ದು ಇನ್ನೊಂದು. ಈ ಎರಡೂ ಪ್ರಕ್ರಿಯೆಗಳನ್ನು ಒಟ್ಟಿಗಿಟ್ಟು, ಸಮಾನತೆಯತ್ತ ಸಂಸ್ಕೃತಿಯ ಬೆಳವಣಿಗೆಯ ಆಶಯವನ್ನು ಕುವೆಂಪು ಕಾದಂಬರಿಗಳು ಬಿಂಬಿಸುತ್ತವೆ"[೧] ಎನ್ನುತ್ತಾರೆ. ಈ ಆಶಯದತ್ತ ಸಾಗುವಲ್ಲಿ ಕಾನೂರು ಹೆಗ್ಗಡತಿಯಲ್ಲಿ 'ಅಸಂಸ್ಕೃತಿ- ಕುಸಂಸ್ಕೃತಿ- ಸುಸಂಸ್ಕೃತಿ'ಗಳ ನಡುವಿನ ಮುಖಾಮುಖಿ ತಾಕಲಾಟಗಳನ್ನು ನೈತಿಕ ದೃಷ್ಟಿಯಿಂದ ನೋಡುವ ಯತ್ನ ಮುಖ್ಯವಾಗುತ್ತದೆ. ಅದೇ 'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ಆ ಆಶಯ ಎಲ್ಲ ಜೀವಜಾತಿಗಳ ಅತ್ಯುನ್ನತ ವಿಕಾಸ ಸಾಧ್ಯತೆಯ ಆಧ್ಯಾತ್ಮಿಕ ತತ್ವದೊಂದಿಗೆ ಬೆಸೆದುಕೊಳ್ಳುತ್ತದೆ.

ಕುವೆಂಪು ಅವರ ಎರಡು ಕಾದಂಬರಿಗಳಲ್ಲಿ ಸುಬ್ಬಮ್ಮನೇ ಅತ್ಯಂತ ಪ್ರಖರವಾದ ಗತಿರಚನೆಯಿರುವ ತುಂಬ ಸ್ಪಷ್ಟ ಹಾಗೂ ಬಲಿಷ್ಠವಾದ ಪಾತ್ರ. ಪುರುಷಪ್ರಧಾನ ಊಳಿಗಮಾನ್ಯ ವ್ಯವಸ್ಥೆಯನ್ನು ಒಳಗೊಂಡ ಸಂಸ್ಕೃತಿಯ ಎಲ್ಲ ವಿಧವಾದ ಜೀತಾತ್ಮಕ ಅಂಶಗಳೂ ಈಕೆಯಲ್ಲಿ ಘನೀಭವಿಸಿವೆ. ಬಡತನ ಸಿರಿತನದ ಅಸಮಾನತೆಯ ವೈಪರೀತ್ಯಗಳಿಂದ ಮಾನವತ್ವದ ಹಿಗ್ಗುವಿಕೆ-ಕುಗ್ಗುವಿಕೆಯ ಪರಿಣಾಮಗಳಿಗೆ ಈಕೆ ನಿದರ್ಶನವಾಗುತ್ತಾಳೆ. ಯಜಮಾನಿಕೆ, ಊಳಿಗತನ, ಪ್ರೇಮ, ಕಾಮಗಳ ವೈಪರೀತ್ಯಗಳೂ ಕಡೆಯಲ್ಲಿ ಮೇಳೈಸಿವೆ. ಹತ್ತಿಕ್ಕಲ್ಪಟ್ಟ ಮಾನಸಿಕ ಭಾವನೆಗಳು, ಪ್ರಾಕೃತಿಕ ಸ್ವಭಾವ, ಪ್ರಾಕೃತಿಕ ಸ್ವಚ್ಛಂದಗಳಿಂದ ಉಲ್ಬಣಿಸುವ ವಿಪರೀತ ಸ್ಥಿತಿಗಳಿಗೆ ಈಕೆ

---

೧. ಡಾ. ಬಿ.ಎನ್.ಸುಮಿತ್ರಾಬಾಯಿ ಕುವೆಂಪು ಅವರ ಕಾದಂಬರಿಗಳಲ್ಲಿ ಸ್ತ್ರೀತ್ವದ ಪ್ರಭೇದಗಳು, ಪು. ೪೫, ಕುವೆಂಪು ಸಾಹಿತ್ಯ ವೈಚಾರಿಕ ನೆಲೆಗಳು, ಕುವೆಂಪು ವಿಶ್ವವಿದ್ಯಾಲಯ, ಶಂಕರಘಟ್ಟ, ೧೯೯೮.

ಮಾದರಿಯಾಗುತ್ತಾಳೆ. ಅವೆಲ್ಲದರ ಜೊತೆಗೆ ನವ ಶ್ರೀಮಂತಿಕೆಯ ವಿಕೃತರೂಪ ಗುಲಾಮರಲ್ಲಿ ವ್ಯಕ್ತವಾಗುವ ಬಗೆಗೂ ಈಕೆ ನಿದರ್ಶನದಂತಿದ್ದಾಳೆ. ಈ ರೀತಿ ಹಲವು ನಿಟ್ಟಿನ ದ್ವಂದ್ವಗಳ ಸಂಕೀರ್ಣತೆಯಲ್ಲಿ ಈಕೆಯ ವ್ಯಕ್ತಿತ್ವವನ್ನು ಕಡೆದಿರುವ ಕುವೆಂಪು ಅವರ ಅಸಂಸ್ಕೃತಿ–ಕುಸಂಸ್ಕೃತಿ ಮತ್ತು ಸುಸಂಸ್ಕೃತಿಗಳನ್ನು ಕುರಿತ ಮೌಲ್ಯಾನ್ವೇಷಕ ನೈತಿಕ ಜಿಜ್ಞಾಸೆಗೆ ಹೂವಯ್ಯನಿಗೆ ಸರಿಸಮಾನವಾಗಿ ಸವಾಲಾಗಿ ನಿಲ್ಲುವ ಸ್ತ್ರೀತ್ವವು ಈ ಸುಬ್ಬಮ್ಮನದೇ. ಪ್ರಾರಂಭದಿಂದ ಕೊನೆಯವರೆಗೆ ಇವರ ನಡುವೆ ಪೂರಕ ಅಂಶಗಳೇನೂ ಇಲ್ಲ. ಇವರ ಪರಸ್ಪರ ಇರವು ಅರಿವು ಕೂಡ ತುಯ್ದಾಟದಿಂದ ಕೂಡಿದೆ ಎಂಬುದು ಕೃತಿಯೊಳಗೆ ಸಿದ್ಧವಾಗಿರುವ ವಾಸ್ತವವಾಗಿದೆ.

ಸರ್ವಚೇತನಗಳ ವಿಕಾಸ ಸಾಧ್ಯತೆಯನ್ನು ಆಧ್ಯಾತ್ಮಿಕವಾಗಿ ಎತ್ತಿ ಹಿಡಿಯುವ ಕುವೆಂಪು ಅವರ ವೈಚಾರಿಕ ವಾಸ್ತವಗಳೊಂದಿಗೆ ಆಕೆಯ ಸ್ವಭಾವ ಹಾಗಾಗಲೂ ಕಾರಣಗಳನ್ನು ವ್ಯಾಖ್ಯಾನಿಸುತ್ತಾರೆ. ಮಾನವೀಯ ನೆಲೆಯಿಂದ ಈಕೆಯೊಳಗನ ಅಂತಸತ್ವಗಳನ್ನು ಇವಳಲ್ಲಿ ಶರೀರದ ಚೆಲುವು ದುಡಿಯುವ ಸಾಮರ್ಥ್ಯದಿಂದ ಹುಟ್ಟುವ ದೈಹಿಕ ಗಟ್ಟಿತನ, ಚಟುವಟಿಕೆಯ ಸ್ವಭಾವ, ಅಧಿಕಾರವನ್ನು ಸಮರ್ಥವಾಗಿ ನಿರ್ವಹಿಸಬಲ್ಲ ದಕ್ಷತೆ, ಎಲ್ಲವೂ ಇರುವುದನ್ನು ಕಾಣುತ್ತಾರೆ. ಆದರೆ ಇವೆಲ್ಲ ಇದ್ದರೂ ಸುಸಂಗತವಾಗಿ ಬೆಳೆಯಲಾರದಷ್ಟು ದಮನಕಾರಿಯಾದ ವ್ಯವಸ್ಥೆಯಿಂದಲೂ, ಅದರ ಪರಿಣಾಮವಾದ ಸ್ವಭಾವದಿಂದಲೂ ಈಕೆ ಬಂಧಿತಳಾಗಿದ್ದಾಳೆಂಬುದು ಕೃತಿಯ ವಿವರಗಳಲ್ಲೇ ಸ್ಪಷ್ಟವಾಗುವಂತದ್ದು. ಈ ಬಲಿಷ್ಠ ವಿನಾಶಾತ್ಮಕ ಶಕ್ತಿಗಳು ಎಳೆದ ಕಡೆಗೆ ಸಾಗಿದ ಈಕೆಯ ಬದುಕಿಗೆ ದುರಂತವು ಅನಿವಾರ್ಯವಾಗುತ್ತದೆ. ಮೌಲ್ಯರಹಿತವಾದ ನಿರ್ಮಾನವ ಸ್ಥಿತಿಯಲ್ಲಿ ಈಕೆಯ ಸಾವು ಸಂಭವಿಸುತ್ತದೆ. ಹೂವಯ್ಯ ಪ್ರತಿನಿಧಿಸುವ ಮೌಲ್ಯದ ದೃಷ್ಟಿಯಲ್ಲಿ ಈಕೆ ಕೇವಲ ಅನುಕಂಪದ ವಸ್ತುವಾಗುತ್ತಾಳೆ.

ತನ್ನನ್ನು ಆವರಿಸಿರುವ ಬಂಧನಗಳೆದುರು ಸುಬ್ಬಮ್ಮ ತೀರ ಅಸಹಾಯಕಳೂ ಅಲ್ಲ, ಆದರೆ ಪ್ರತಿಭಟನೆಗಿಂತ ಪರಿಸ್ಥಿತಿಯೊಂದಿಗೆ ರಾಜಿಮಾಡಿಕೊಳ್ಳುತ್ತ, ಅವಕಾಶ ಸಿಕ್ಕಿದಾಗ ಪ್ರಬಲವಾಗುವುದು ಈಕೆಯ ಸ್ವಭಾವವಾಗಿದೆ. ಚಂದ್ರಯ್ಯಗೌಡರಿಂದ ತಾನು ಕೊಲೆಯಾಗುವುದನ್ನು ತಪ್ಪಿಸಿಕೊಳ್ಳಲು ತವರಿಗೆ ಓಡುವುದು. ತವರಿಗೆ ಅಗತ್ಯಕ್ಕೆ ತಕ್ಕಂತೆ ಮತ್ತೆ ದುಡಿಮೆಗೆ ತನ್ನನ್ನು ತೆತ್ತುಕೊಳ್ಳುವುದರಲ್ಲಿ ಈ ಬಂಧನಗಳನ್ನು ಮೀರುವ ಹೋರಾಟವಂತೂ ಇದೆ. ಅದು ಕೇವಲ ಅಸ್ತಿತ್ವಕ್ಕಾಗಿ ಆದ ಹೋರಾಟವೇ ಆಗಿದೆ. ಆದರೆ ಶಕ್ತಿಗುಂದಿದ ಚಂದ್ರಯ್ಯಗೌಡರನ್ನು ಅಂತ್ಯಕಾಲದಲ್ಲಿ ಸೇವೆ, ಪ್ರೀತಿಗಳಿಂದ ಗೆದ್ದು, ಅವರ ಮರಣದ ನಂತರ ಆ ಅಧಿಕಾರವನ್ನು ತಾನು ಪಡೆದುಕೊಳ್ಳುವುದು ತನ್ನನ್ನು ಹತ್ತಿಕ್ಕಿದ್ದ ಭೌತಿಕ ಪರಿಸ್ಥಿತಿಗಳ ವಿರುದ್ಧ ಈಕೆ ಸಾಧಿಸುವ ವಿಜಯವಾಗಿದೆ. ಈ

ವಿಜಯದ ಅಂಶವನ್ನು ಗುರುತಿಸುವ ಟಿ.ಪಿ.ಅಶೋಕ "ಈಕೆಯ ಮರಣದ ದುರಂತಕ್ಕಿಂತ ಈಕೆಯ ವಿಜಯವೆ ಓದುಗರ ಮನಸ್ಸಿಗೆ ಹೆಚ್ಚು ತಟ್ಟುವಂಥದ್ದೆಂದು ಭಾವಿಸುತ್ತಾರೆ"[೧] ಒತ್ತು ನನ್ನದು.

ಕಾನೂರು ಹೆಗ್ಗಡತಿಯ ಸೀತೆಯು ಶಕ್ತಿ ಇಲ್ಲದವಳಾಗಿದ್ದಾಳೆ. ಆಯ್ಕೆಯ ಹಕ್ಕನ್ನು ಸ್ವಾತಂತ್ರ್ಯದ ಅಪೇಕ್ಷೆಯನ್ನು ಪ್ರಕಟಿಸುವ ಧೈರ್ಯ ಸಾಲದೆ ಬದುಕಿನಲ್ಲಿ ಅಸಾಧಾರಣ ಯಾತನೆ ನೋವು ಅನುಭವಿಸುತ್ತಾಳೆ. ಸಾಮಾಜಿಕ ನಿರ್ಬಂಧಗಳನ್ನು ಮೀರಲಾರದ, ವೈಯಕ್ತಿಕ ಸಂಕೋಲೆಗಳಿಂದ ನರಳುವ ಹೂವಯ್ಯನ ನಿಸ್ಕ್ರೀಯತೆಯು ಮುತ್ತಳ್ಳಿಯ ಶ್ಯಾಮಯ್ಯಗೌಡರ ಮಗಳು ಸೀತೆಯ ಬದುಕಿನ ಯಾತನೆಗಳಗೆ ಕಾರಣವಾಗುತ್ತದೆ. ಸೀತೆಯನ್ನು ಪ್ರೀತಿಸುವ, ಲಗ್ನವಾಗುವ ವಿಷಯದಲ್ಲಿ ಹೂವಯ್ಯ ಖಚಿತ ನಿಲುವು ಮತ್ತು ಕ್ರಿಯೆಗೆ ಮುಂದಾಗಿದ್ದು ಸೃಜನಶೀಲತೆಗೆ ಎರವಾಗುತ್ತದೆ. ಲೌಕಿಕವನ್ನು ಮೀರಿ ಅಧ್ಯಾತ್ಮಿಕತೆಯ ಕಡೆಗೆ ಹೊರಳಿದರೂ ಹೂವಯ್ಯ ಅಸಾಮಾಜಿಕವಾಗಿಯೇ ಉಳಿದುಬಿಡುತ್ತಾನೆ.

ಹೆಣ್ಣಿನ Potentialityಯ ಅಭಿವ್ಯಕ್ತಿ ಸೀತೆಯಿಂದ ಸಾಧ್ಯವಾಗದ ಕಾರಣ ಸೀತಾಯಣವಾಗಬೇಕಿದ್ದ ಕಾದಂಬರಿ ಕಾನೂರು ಹೆಗ್ಗಡತಿಯಾಗಿ ಬೆಳೆಯುತ್ತದೆ. ಇಷ್ಟಾಗಿಯೂ ಜಾತಿನಿಷ್ಠ ಸಮಾಜಕ್ಕೆ ಮುಖಾಮುಖಿಯಾಗುವ ಸಂದರ್ಭದಲ್ಲಿ ಸೀತೆಯ ಪಾತ್ರ ಮುಖ್ಯವಾಗುತ್ತದೆ. ರಾಮಯ್ಯ ಕಟ್ಟಿದ ತಾಳಿಯನ್ನು ಕಿತ್ತೆಸೆದು ಅರ್ಧರಾತ್ರಿಯಲ್ಲಿ ಕೆಳಕಾನೂರಿಗೆ ಬಂದು ಹೂವಯ್ಯನಲ್ಲಿ ನಿಲ್ಲುವ ನಿರ್ಧಾರ ಗಡುಸಾದದ್ದೇ ಸರಿ.

'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ಕಂಡುಬರುವ ಸ್ತ್ರೀಯರು ಸಂಪ್ರದಾಯವನ್ನು ಮೀರಿ ಬದಲಾಗುತ್ತಿದ್ದ ಸಾಮಾಜಿಕ ಧೋರಣೆಗಳಿಗೆ ಸ್ಪಂದಿಸಿದವರು. ಚಿನ್ನಮ್ಮ ಸೀತೆಯಂತೆ ಕೊರಗುತ್ತಾ ಕುಳಿತವಳಲ್ಲ. ತನ್ನ ಸಂಗಾತಿಯ ಆಯ್ಕೆಯ ಹಕ್ಕನ್ನು ತಾನೇ ನಿರ್ಣಯಿಸುವ ಸ್ವತಂತ್ರ ವ್ಯಕ್ತಿತ್ವ ಅವಳದು. ಕೌಟುಂಬಿಕ ಚೌಕಟ್ಟು ಒಪ್ಪದಿದ್ದಾಗ ಅದನ್ನು ಕಿತ್ತೆಸೆದು ಹೊರಬಂದಳು. ವಿವೇಕ ವಿಚಾರಗಳಿಗೆ ಗಟ್ಟಿಯಾದವಳು. ಜೀವೋನ್ಮುಖತೆಯ ಕಡೆಗೆ ತುಡಿಯುವವಳು. ತಾನು ಬಯಸಿದವನನ್ನು ಕೂಡುವ ಸ್ವತಂತ್ರ್ಯವನ್ನು ಗಳಿಸಿಕೊಂಡಿದ್ದಳು. ಸಾಮಾಜಿಕ ಕಟ್ಟುಪಾಡುಗಳನ್ನು ಉಲ್ಲಂಘಿಸಿ ಮುಕುಂದಯ್ಯನ ಬಳಿ ಬಂದವಳು. ಬಾಳನ್ನು ಹಸನುಮಾಡಿಕೊಂಡವಳು.

---

೧. ಟಿ.ಪಿ.ಅಶೋಕ, ಸಾಹಿತ್ಯ ಸಂದರ್ಭ, ಪು. ೪೫, ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ, ೧೯೯೧.

ಕುವೆಂಪು ಅವರ ಕಾದಂಬರಿಗಳಲ್ಲಿ ಕೆಲವೊಂದು ಕುತೂಹಲಕರವಾದ ಅಂಶಗಳನ್ನು ಗುರುತಿಸಬಹುದು. ಪುರುಷಪ್ರಧಾನ ವ್ಯವಸ್ಥೇಯಲ್ಲಿನ ಲಿಂಗಾಧರಿತ ಶೋಷಣೆಯನ್ನು ಒಂದು ತಲೆಕೆಳಗಾದ ಪಿರಮಿಡ್ಡಿನ ರೀತಿ ಕಲ್ಪಿಸಿಕೊಂಡರೆ, ಈ ಪಿರಮಿಡ್ಡಿನ ಅತ್ಯಂತ ಕೆಳಗಿನ ಕೇಂದ್ರ ಬಿಂದುವಿನಲ್ಲಿ ಶ್ರೇಣೀಕರಣದಲ್ಲಿ ಅತಿಕೆಳಗಿನ ಜಾತಿ, ವರ್ಗಗಳ ಸ್ತ್ರೀಯರು ನಿಲ್ಲುತ್ತಾರೆ. ತಿಮ್ಮಿ, ಪೀಂಚಲು, ಅಕ್ಕಣಿ, ಸೇಸಿ, ಕಾಡಿಯಂಥವರು ತಮ್ಮ ದುಡಿಮೆ, ತಮ್ಮ ವ್ಯಕ್ತಿತ್ವ ಎರಡರಿಂದಲೂ ಇತರರನ್ನು ಬೆಳೆಸುವವರು. ದಲಿತ ಸ್ತ್ರೀಯರಂತೆ, ದಲತರಲ್ಲದೆ ಇತರ ಜಾತಿಗಳ ವರ್ಗಗಳ ಸ್ತ್ರೀಯರನ್ನೂ ಹೀಗೆ ಶೋಷಿತಾತಿಶೋಷಿತ ನೆಲೆಯಲ್ಲಿ ಕುವೆಂಪು ಕಂಡಿದ್ದರೆಂಬುದು ಗಮನಾರ್ಹ. ಇಂಥ ಹೆಣ್ಣುಗಳ ಆರ್ಥಿಕನೆಲೆ ಸದಾ ದುರ್ಬಲ, ಅಸ್ಥಿರ, ಆದ್ದರಿಂದಲೇ ಲೈಂಗಿಕವಾಗಿಯೂ ಸುಲಭವಾಗಿ ಮೇಲಿನವರಿಗೆ ಬಲಿಬೀಳಬಹುದಾದ ಸಾಧ್ಯತೆ ಇವರದು. ತಮ್ಮ ತನವೊಂದನ್ನು ಹೊಂದಿರುವಂತೆ ತೋರಲು ಪೀಂಚಲು, ತಿಮ್ಮಿಯರು ಮೇಲ್ಜಾತಿ ಸ್ತರದ ಗಂಡಸರಿಗೆ ಭೋಗದ ವಸ್ತುವಾಗಿ ಬಿಡಬಹುದಾದ ಅಭದ್ರತೆಯ ನೆಲೆಯಲ್ಲೇ ಬದುಕಿರುವವರು. ಜಾತಿಯ ಎಣಿಕೆಯಲ್ಲಿ ಇವರಿಗಿಂತ ಕ್ರಮವಾಗಿ ಮೇಲೆ ಇರುವ ಹಳೆಪೈಕದ ಹೂವಿ, ವಿಧವೆ ನಾಗಕ್ಕ ಗಂಡ ಬಿಟ್ಟ ಹಳೆಮನೆ ರಂಗಮ್ಮ ಮಂಜುಭಟ್ಟರ ಸೊಸೆ ಮುಂತಾದವರು ಆರ್ಥಿಕವಾಗಿ ಹಾಗೂ ಲೈಂಗಿಕ ಶೋಷಣೆಯಲ್ಲಿ ಕೆಳಸ್ತರದ ಸ್ತ್ರೀಯರಿಗಿಂತಲೂ ಸುಧಾರಿತ ಸ್ಥಿತಿಯಲ್ಲ. ಸಮಾಜದ ವಿವಿಧ ಜಾತಿ, ವರ್ಗಗಳೆಲ್ಲದರ ಬಳಿಗೂ ಇರುವಂಥ ಲಿಂಗಾಧಾರಿತ ಯಜಮಾನಿಕೆ, ದಬ್ಬಾಳಿಕೆಗಳನ್ನು ಹೀಗೆ ಸೂಕ್ಷ್ಮವಾಗಿ ಅನಾವರಣಗೊಳಿಸುವಲ್ಲಿ ಕುವೆಂಪು ನಿಷ್ಪಕ್ಷಪಾತ ಧೋರಣೆಯನ್ನೇ ಬಹುವಾಗಿ ತೋರಿದರೂ ಶೂದ್ರ ದೃಷ್ಟಿಯಿಂದ ಬ್ರಾಹ್ಮಣರ ಸಂಕುಚಿತ ಬುದ್ಧಿಯನ್ನು ವಿಡಂಬನೆಮಾಡುವ ಒಂದು ಧೋರಣೆ ಕುವೆಂಪು ಬರಹದಲ್ಲಿ ಬೇರೆ ಕಡೆಯೂ ಇರುವಂತೆ ಇಲ್ಲೂ ಕಾಣಬಹುದಾಗಿದೆ.

ಈ ಕೆಳಗಿನ ನೆಲೆಯ ಸ್ತ್ರೀಯರ ಭುಜಗಳ ಮೇಲೆ ನಿಲ್ಲುವ ಸ್ತ್ರೀಯರು ಸಾಂಸ್ಕೃತಿಕ ವ್ಯವಸ್ಥೆಯಿಂದಾಗಿ ಸ್ತ್ರೀಯರಾದ್ದರಿಂದ ಶೋಷಿತರೆ. ಆದರೆ ಆ ವ್ಯವಸ್ಥೆಯ ಯಜಮಾನರೊಂದಿಗೆ, ಅವರ ಶೋಷಿತ ತಾತ್ವಿಕತೆಯೊಂದಿಗೆ ರಾಜಿಮಾಡಿಕೊಂಡು ಆ ವ್ಯವಸ್ಥೆಯ ಶೋಷಕಾಂಶಗಳನ್ನೇ ಅಂತಸ್ಥವಾಗಿಸಿಕೊಂಡು ತಮಗಿಂತ ದುರ್ಬಲರಾದ ಸ್ತ್ರೀಯರನ್ನು ಪುರುಷರಂತೆಯೇ ಶೋಷಿಸುವ ಸ್ತ್ರೀಯರಿದ್ದಾರೆ. ಬಿ.ಎನ್.ಸುಮಿತ್ರಬಾಯಿ ಯವರು ಅಭಿಪ್ರಾಯಪಡುವಂತೆ "ಮಲೆಗಳಲ್ಲಿ ಮದುಮಗಳು ಕಾದಂಬರಿಯಲ್ಲಿ

ಬರುವ ಸ್ತ್ರೀಯರಾದ ಸೇರೆಗಾರರ ಹೆಣ್ಣು ಗಂಗೆ, ಅಂತಕ್ಕಶೆಟ್ಟಿಯ ಮಗಳು ಕಾವೇರಿ, ನಾಗಕ್ಕನ ಅತ್ತೆ ನಾಗತ್ತೆ, ಜಟ್ಟಮ್ಮ, ಲಕ್ಷ್ಮಮ್ಮ ಮುಂತಾದವರು ದಾಸ್ಯದ ಪರಂಪರಾಗತವಾದ ವಿವಿಧ ಸ್ತರಗಳನ್ನು ಪ್ರತಿನಿಧಿಸುತ್ತಾರೆ, ಮಾತ್ರವಲ್ಲ, ಆ ದಾಸ್ಯವನ್ನೇ ಉಳಿಸಿಡುವ ವಾಹಕಗಳೂ ಆಗಿದ್ದಾರೆ. ತಮ್ಮ ದುಃಖ, ಯಾತನೆಗಳ ಮೂಲ ಕಾರಣಗಳು ಏನೆಂದು ಅರಿವಿಲ್ಲದೆ ಇವರು ತಮ್ಮ ತಮ್ಮ ಹೆಣ್ಣುತನವನ್ನೇ ಬಂಡವಾಳವಾಗಿ ಮಾಡಿಕೊಂಡು ಯಜಮಾನರನ್ನು ಓಲೈಸಲೆತ್ನಿಸುತ್ತಾರೆ. ಅವರ ಮೇಲೆ ಹಿಡಿತ ಸಾಧಿಸಬೇಕೆಂಬ ತಮ್ಮ ಹಪಾಹಪಿಗಳಲ್ಲಿ ತಮ್ಮ ಅಧೀನಕ್ಕೆ ಬರುವಂತ ಸ್ತ್ರೀಯರನ್ನು ತಾವು ಗಳಿಸಿದ ಹೊಸ ಅಧಿಕಾರದ ನೆಲೆಯಿಂದ ಶೋಷಿಸುತ್ತಾ ಬರುತ್ತಾರೆ. ಈ ಬಗೆಯ ವಿಸ್ತೃತ ಮಾದರಿಯೊಂದನ್ನು ಹೆಗ್ಗಡತಿಯಾದ ನಂತರದ ಸುಬ್ಬಮ್ಮನಲ್ಲೂ ಕಾಣಲು ಸಾಧ್ಯ"[೧] ಎನ್ನುತ್ತಾರೆ.

ಗ್ರಾಮೀಣ ಮಧ್ಯಮ ಜಾತಿಯ ಜಮೀನುದಾರ ಮನೆತನಗಳ ಸ್ತ್ರೀಯರು ಕುವೆಂಪು ಅವರ ಕಾದಂಬರಿಗಳಲ್ಲಿ 'ಉತ್ತಮಸ್ತ್ರೀತ್ವ'ದ ಮಾದರಿಗಳಾಗಿದ್ದು ಈ ಪಿರಮಿಡ್ಡಿನ ಅತಿ ಉನ್ನತವಾದ ನೆಲೆಯಲ್ಲಿ ನಿಲ್ಲುತ್ತಾರೆ. ಕಾಗಿನೂರಿನ ಅಮ್ಮ ದಾನಮ್ಮ ಹೆಗ್ಗಡತಿ, ಮುತ್ತಳ್ಳಿಯ ಗೌರಮ್ಮ, ಚಿನ್ನಮ್ಮ, ಚಿನ್ನಮ್ಮನ ಅಜ್ಜಿ ಈ ಸ್ತರದ ಪ್ರತಿನಿಧಿಗಳು, ಕೌಟುಂಬಿಕವಾಗಿ ಪಿತೃಪ್ರಾಧಾನ್ಯದ ಚೌಕಟ್ಟಿನ ಒಳಗೇ ಬದುಕುವವರಾಗಿಯೂ ಈ ಹೆಂಗಸರು ಒಳಗಿನ ಸತ್ವ, ಮಾತೃಸಹಜ ಅಂತಃಕರಣ, ವಿವೇಚನೆಗಳಿಂದ ಅನ್ಯಾಯ-ವನ್ನು ಕಂಡಾಗ ಪ್ರತಿಕ್ರಿಯಿಸುವಷ್ಟು ಸಂವೇದನೆಯಿರುವವರು. ಈ ದೃಷ್ಟಿಯಿಂದ ಹಿರಿಯ ತಲೆಮಾರನ್ನು ದಾನಮ್ಮ ಹೆಗ್ಗಡತಿ ಹಾಗೂ ಗೌರಮ್ಮ ಸೂಚಿಸಿದರೆ ಇವರ ಮುಂದಿನ ಪೀಳಿಗೆಯ ಚಿನ್ನಮ್ಮ ಮತ್ತು ಸೀತೆ ಅಧೀನತೆಯ ನೆಲೆಯಿಂದ ಸಮಾನತೆಯ ಕಡೆಗೆ ಮಾನವ ಜನಾಂಗವನ್ನು ಕೊಂಡೊಯ್ಯುವ ವಿಕಾಸ ತತ್ವದ ಶಕ್ತಿ ತುಂಬಿದ ಮೊಳಕೆಯಂತೆ ಇದ್ದಾರೆ. ಒಟ್ಟಾರೆಯಾಗಿ ಕುವೆಂಪು ಕಾದಂಬರಿಗಳು ಸೂಚಿಸುವ ಹೊಸಬದುಕಿನ ಮೌಲ್ಯಗಳಿಗೆ ಒಂದು ಸಾಧ್ಯತೆಯನ್ನು ಇವರು ಸೂಚಿಸುತ್ತಾರೆನ್ನಬಹುದು.

---

೧. ಡಾ. ಬಿ.ಎನ್.ಸುಮಿತ್ರಾಬಾಯಿ, ಕುವೆಂಪು ಕಾದಂಬರಿಗಳು ಒಂದು ಸ್ತ್ರೀವಾದಿ ಓದು, ಪು. ೨೬೨, (ಸಂ.) ಡಾ. ಗುರುಪಾದ ಮರಿಗುದ್ದಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೪.

ಕುವೆಂಪು ಕಾದಂಬರಿಗಳು ಒಳಗೊಂಡಿರುವುದು ಶತಮಾನ ಪೂರ್ವದ ಕರ್ನಾಟಕದ ಹಳ್ಳಿಗಾಡಿನ ಬದುಕನ್ನು, ಆದ್ದರಿಂದ ಸಹಜವಾಗಿ ಈ ಎರಡೂ ಕಾದಂಬರಿಗಳಲ್ಲಿ ಸೀತೆ ಮತ್ತು ಪಾದ್ರಿ ಜೀವರತ್ನಯ್ಯನ ಮಗಳು. ಈ ಇಬ್ಬರನ್ನು ಬಿಟ್ಟರೆ ಉಳಿದೆಲ್ಲ ಸ್ತ್ರೀಯರು ನಿರಕ್ಷರಿಗಳು. ಹೆಂಗಸರು ವಿದ್ಯೆ ಕಲಿಯುವುದು ಗಂಡಸರು ಸೀರೆ ಉಡುವುದಕ್ಕಿಂತಲೂ ಹಾಸ್ಯಾಸ್ಪದ ಎನಿಸುತ್ತಿದ್ದ ಕಾಲ ಅದು. ಗಂಡನಾದವನು ಹೆಂಡತಿಯನ್ನು ಅದು ಎಂದು ಕರೆದರೆ, ಸ್ತ್ರೀಪುರುಷರಿಬ್ಬರೂ ಅದರಲ್ಲಿ ಏನೂ ಅಸಹನೀಯತೆ ಕಾಣಲಾರದು. ಮದುವೆಯಾಚೆಗಿನ ಗಂಡಂದಿರ ಲೈಂಗಿಕ ಸಂಬಂಧಗಳಿಗೆ ಗಂಡಸರ ಸ್ವಭಾವವೇ ಹಾಗೆ ಎಂದು ಪ್ರತಕ್ರಿಯಿಸಿ ಸಹಿಸುವ, ಕ್ಷಮಿಸುವ ಈ ಹೆಣ್ಣು ಮಕ್ಕಳು ಜಾತಿನೆಲೆಗಳಲ್ಲಿ ಮಾತ್ರ ಮೇಲು ಕೀಳುಗಳನ್ನು ತಪ್ಪದೆ ಪಾಲಿಸುವ ನಿಷ್ಠಾವಂತ ವ್ಯವಸಾಯಿಗಳು. ತಮ್ಮ ತಮ್ಮ ಕರುಳಿನ ಕುಡಿಗಳಿಗಾಗಿ ತುಡಿವ ಮಾತೆಯರು. ಪರಿಸ್ಥಿತಿ ತಮ್ಮ ಹಿಡಿತದಲ್ಲಿಲ್ಲದಾಗ ಹೆಣ್ಣು–ಗಂಡಸರಾಗಿ ತಾವು ಇನ್ನೇನು ಮಾಡಲು ಸಾಧ್ಯ ಎಂದು ಅಸಹಾಯಕತೆಯನ್ನು ಪ್ರದರ್ಶಿಸುವರು.

'ಮಲೆಗಳಲ್ಲಿ ಮದುಮಗಳು' ಕಾದಂಬರಿಯ ಸ್ತ್ರೀಯರೆಲ್ಲರೂ ಮೇಲುಕೀಳೆಂಬ ಭಾವನೆಗೆ ಅವಕಾಶವೇ ಇಲ್ಲ. ಲೈಂಗಿಕ ತೃಪ್ತಿಗಾಗಿ ಅಲ್ಲಿನ ಜನ ಏನುಬೇಕಾದರೂ ಮಾಡಲು ಸಿದ್ಧರಿದ್ದರಿಂದ ಹೆಣ್ಣು ಒಂದು ರೀತಿಯಲ್ಲಿ ಮುಖ್ಯಳಾಗಿದ್ದಳು. ಹೀಗಾಗಿ ಹೆಣ್ಣು ತಾನು ಮೆಚ್ಚಿದವರನ್ನು ಸೇರಲು ಇಲ್ಲವೆ ಮೆಚ್ಚಿದವನಿಂದ ತನ್ನನ್ನು ರಕ್ಷಿಸಿಕೊಳ್ಳಲು ಹೆಣಗಾಡುತ್ತಿದ್ದಳು. ಹೀಗಾಗಿ 'ರಕ್ಷಿಸುವ ರಕ್ಷಿಸಿಕೊಳ್ಳುವ" ಕಾಯಕವೇ ಕಾದಂಬರಿ–ಯಲ್ಲಿ ನಡೆದು ಎಲ್ಲಾ ಸ್ತ್ರೀಯರೂ ಒಬ್ಬರಿಗೊಬ್ಬರು ಸಹಾಯಕರಾಗಿ ನಿಂತು ಅನ್ಯೋನ್ಯ ಬಾಳನ್ನು ಬಾಳಿದ್ದಾರೆ.

ಕಾದಂಬರಿಯ ಕೇಂದ್ರವ್ಯಕ್ತಿ ಗುತ್ತಿ, ತಿಮ್ಮಿಯರನ್ನು ಪಡೆಯಲು ಎಷ್ಟು ಶ್ರಮಪಟ್ಟಿದ್ದಾನೆಂಬುದಕ್ಕೆ 'ಒಂದು ಹುಳುವಿನ' ಪ್ರಸಂಗವೊಂದು ಸ್ಪಷ್ಟ ಸಂಕೇತ. ತಿಮ್ಮಿ ಗುತ್ತಿಯೊಡನೆ ಓಡಿ ಬಂದವಳು, ಚಿನ್ನಮ್ಮನಂತೆ. ಪ್ರೇಮಿಗಳಿಗೆ ಲೆಕ್ಕವಿಲ್ಲ. ತಿಮ್ಮಿ ನಾಯಿಗುತ್ತಿಯೊಡನೆ ಓಡಿಬಂದಂತೆ ಬಚ್ಚನೊಡನೆಯೂ ಓಡಿಬಂದಿದ್ದಳು. ಹೀಗಾಗಿ ಆಕೆಗೆ ಗುತ್ತಿಯಿಂದೊದಗಿದ್ದ ರಸಾನುಭವ ಹೊಸತು ಆಗಿರಲಿಲ್ಲ. ಮೊದಲನೆಯದು ಆಗಿರಲಿಲ್ಲ. ಅದಕೆ ತಾನು ಗುತ್ತಿಯೊಡನೆ ಓಡಿಬಂದಿದ್ದೇನೆಂದು ಒಪ್ಪಿಕೊಳ್ಳಲಾರದಷ್ಟು ಸ್ವಾಭಿಮನಿ ತಿಮ್ಮಿ. ಒಂದು ರೀತಿಯಿಂದ ಗುತ್ತಿ – ತಿಮ್ಮಿಯರಲ್ಲಿ ಕಾಣುವ ಹೆಣ್ಣು–ಗಂಡಿನ ಸಮಾನತೆಯನ್ನು ಕಾದಂಬರಿಯಲ್ಲೆಲ್ಲಿಯೂ ಕಾಣಲಾರವು.

ಮದುವೆಯಾಗದ ಹೆಣ್ಣು ಹಿರಿಯರೆದುರು ನಗುವುದು, ಜೋರಾಗಿ ಮಾತನಾಡುವುದೂ ಎಷ್ಟು ಅಸಾಧ್ಯವಾಗಿತ್ತೋ ಆಕೆ ವಿದ್ಯೆ ಕಲಿಯುವುದು ಅಷ್ಟೇ ಅಸಾಧ್ಯವಾಗಿತ್ತು. ಹೂವಯ್ಯ ಓದುತ್ತಿದ್ದ ಕತೆ ಕೇಳುತ್ತಾ ಕುಳಿತ್ತಿದ್ದ ಪುಟ್ಟಮ್ಮನನ್ನು ಗೌಡರು "ನಿನಗೇನು ಕೆಲ್ಸ ಇಲ್ಲಿ ಓದಿ ಪ್ಯಾಸು ಮಾಡಿ ದೊರೆಸ್ಯಾನಿ ಆಗ್ತೀಯೇನೆ?"[೧] ಎನ್ನುತ್ತಾರೆ. ಮುಕುಂದಯ್ಯ ಚಿನ್ನಮ್ಮನಿಗೆ ಓದು ಬರಹಕಲಿಸಲು ಪ್ರಯತ್ನಿಸಿದಾಗ ಹೆಗ್ಗಡೆಯವರು "ಸಾಕು ಕಣೋ ಅವಳಿನ್ನು ಬರೀವು ಕಲ್ತು ಮಣೆಗಾರಿಕೆ ಮಾಡೋದೊಂದು ಬಾಕಿ"[೨] ಎನ್ನುತ್ತಾರೆ. ಎಚ್.ಟಿ.ಯಶೋಧರರು "ಸಾಮಾಜಿಕ ಕಟ್ಟುಕಟ್ಟಳೆ ರೀತಿ ನೀತಿಗೊಳಗಾದ ಹೆಣ್ಣು ಪಡಬಾರದ ಕಷ್ಟಪಡಬೇಕಾಗಿತ್ತು"[೩]ಎಂದು ಪ್ರತಿಕ್ರಿಯಿಸುತ್ತಾರೆ.

ನಾಗತ್ತೆ –ನಾಗಕ್ಕನ ಸಂದರ್ಭ "ಕೂಡಿಕೆ" ಪದ್ಧತಿಯನ್ನು ಸಮಷ್ಟೀಕರಿಸುವುದು ನಿಜಕ್ಕೂ ಕುತೂಹಲಕರ ಸಂಗತಿ. ಬ್ರಾಹ್ಮಣ ವಿಧವೆಯರ ಕಷ್ಟಗಳ ವಿರುದ್ಧ ೨೦ನೆಯ ಶತಮಾನದ ಆರಂಭದಲ್ಲಿ ನಡೆದ ರಾಷ್ಟ್ರೀಯ ಸುಧಾರಣಾ ಚಳುವಳಿಗಳು ಕೆಳಸ್ತರ, ಕೆಳಜಾತಿಗಳ ಬಹುಸಂಖ್ಯಾತ ಸ್ತ್ರೀಯರಿಗೆ ವೈದವ್ಯವು ಸಮಸ್ಯೆಯೇ ಆಗಿರಲಿಲ್ಲ–ವೆಂಬುದನ್ನು ನಿರ್ಲಕ್ಷಿಸಿದ್ದವು ಎಂದು ಡಿ.ಡಿ.ಕೋಸಾಂಬಿಯಂಥ ಚಿಂತಕರು ಪ್ರತಿಪಾದಿಸಿದ್ದಾರೆ.

ರಾಷ್ಟ್ರೀಯ ಸುಧಾರಣಾವಾದಿ ಚಳುವಳಿಗಳ ಇತಿಮಿತಿಗಳನ್ನು ಕುರಿತ ಚರ್ಚೆಯಲ್ಲಿ ಸಾಮಾನ್ಯವಾಗಿ ಕೆಳ ಜಾತಿವರ್ಗಗಳಲ್ಲಿ ಆಚರಣೆಯಲ್ಲಿದ್ದ 'ಕೂಡಿಕೆ'ಯನ್ನು ಸವಲತ್ತಿನ ನೆಲೆಯೆಂದೇ ಭಾವಿಸಲಾಗುತ್ತದೆ. ಆದರೆ ಕುವೆಂಪು ಅವರು ಚಿತ್ರಿಸುವ ಬಗೆಯಲ್ಲಿ ಉಪಸಾಂಸ್ಕೃತಿಕ ಆಚರಣೆಯಾದ "ಕೂಡಿಕೆ" ಪದ್ಧತಿ ಸವಲತ್ತಾಗುವ ಬದಲಾಗಿ ಪುರುಷಪ್ರಧಾನ ಹಿತಾಶಕ್ತಿಗೆ ಹೊಂದಿಕೊಂಡ ಮಸಲತ್ತಿನಲ್ಲಿ ಸ್ತ್ರೀ ಕೂಡ ವಿವಶಳಾಗಿರುವುದನ್ನು ವ್ಯಂಗ್ಯವಾಗಿಸುತ್ತದೆ.

---

೧. ಡಾ.ಬಿ.ಎನ್. ಸುಮಿತ್ರಾಬಾಯಿ, ಕುವೆಂಪು ಕಾದಮಬರಿಗಳು. ಒಂದು ಸ್ತ್ರೀವಾದಿ ಓದು, ಪು. ೨೬೦, ಕುವೆಂಪು ಕಾದಂಬರಿಗಳು(ಸಂ) (ಡಾ) ಗುರುಪಾದ ಮರಿಗುದ್ದಿ ಕಸಾಅ, ಬೆಂಗಳೂರು, ೨೦೦೪.

೨. ಮಲೆಗಳಲ್ಲಿ ಮದುಮಗಳು– ಕುವೆಂಪು, ಪು. ೧೪೧

೩. ಅದೇ, ಪು. ೧೪೫

ಕುವೆಂಪು ಅವರ ಎರಡೂ ಕಾದಂಬರಿಗಳಲ್ಲಿ ಹೆಣ್ಣಿನ ಬಗ್ಗೆಯೇ ಗಂಡಸರಿಗೆ ಅಪನಂಬಿಕೆ ಇರುವುದರತ್ತ ಗಮನ ಸೆಳೆದು ಬಸವರಾಜ ಕಲ್ಗುಡಿಯವರು "ಇದನ್ನು ಅವನತ ಸಂಸ್ಕೃತಿ ಲಕ್ಷಣವೆಂದು ಗುರುತಿಸಿದ್ದಾರೆ."[೧] ಆದರೆ ಹೆಣ್ತನದ ಬಗೆಗಿನ ಅಪನಂಬಿಕೆ ಎನ್ನುವುದು (ಉದಾ:ಚಂದ್ರಯ್ಯ ಗೌಡ ಸುಬ್ಬಮ್ಮನ ಬಗ್ಗೆ ಐತ ಪೀಂಚಲು ಬಗ್ಗೆ ತಳೆವ ಅಪನಂಬಿಕೆ) ಒಂದು ಸಾಂಸ್ಕೃತಿಕ ವ್ಯವಸ್ಥೆಯಲ್ಲಿನ ತಾತ್ವಿಕತೆಯ ಪರಿಣಾಮವೇ ಹೊರತು ಅದೇ ತಳಪಾಯವಾಗಿರುವುದಿಲ್ಲ. ಅಂದರೆ ಹೆಣ್ಣು ಗಂಡಿನ ಸ್ವತ್ತಾಗಿ ಸ್ಥಾನಪಲ್ಲಟಗೊಂಡ ಮಾನವ ನಾಗರಿಕತೆಯ ಚರಿತ್ರೆಯೇ ಪಿತೃಪ್ರಧಾನ ಸಂಸ್ಕೃತಿಯ ತಳಪಾಯ. ಈ ತಳಹದಿಯ ಮೇಲೆ ಕಟ್ಟಲ್ಪಟ್ಟ ಸಂಸ್ಕೃತಿಯಲ್ಲಿ ಲೈಂಗಿಕ ಅಪನಂಬಿಕೆ ಒಂದು ಅಂಶಮಾತ್ರ.

---

೧. ಬಸವರಾಜ ಕಲ್ಗುಡಿ, ಕುವೆಂಪು ಕಾದಂಬರಿಗಳಲ್ಲಿ ಸ್ತ್ರೀ, ಪು. ೮೧, ಕುವೆಂಪು ಕಾದಂಬರಿಗಳು (ಸಂ) (ಡಾ) ಗುರುಪಾದ ಮರಿಗುದ್ದಿ, ಕಸಾಅ, ಬೆಂಗಳೂರು, ೨೦೦೪.

# ಅಧ್ಯಾಯ – ೫

# ಕುವೆಂಪು ಕಾದಂಬರಿಗಳಲ್ಲಿ ಜೀವನದರ್ಶನ

"ಆರಭ್ಯತೇ ಜೀವ–ಜಗತ್–ಪರಮಾತ್ಮ
ತತ್ತ್ವಾಭಿಧಾನೇನ ಮತಂ ಸಮಸ್ತಂ"[೧]

ಜೀವ, ಜಗತ್ತು, ಈಶ್ವರ ಎಂಬ ಮೂರು ತತ್ತ್ವಗಳನ್ನು ಆಧರಿಸಿಯೇ ಎಲ್ಲಾ ದರ್ಶನಗಳೂ ಆರಂಭವಾಗುತ್ತವೆ. ಅವುಗಳ ವಿವರಣೆಗಳಲ್ಲಿ, ಅವುಗಳಿಗಿರುವ ಪರಸ್ಪರ ಸಂಬಂಧದ ವಿವರಣೆಗಳಲ್ಲಿ ಮತಭೇದಗಳಿರಬಹುದು. ಆದರೆ ಆಧಾರ ತತ್ತ್ವಗಳು ಇವು ಮೂರು ಎಂಬುದು ಪಾಶ್ಚಾತ್ಯರಿಗೂ ಪೌರ್ವಾತ್ಯರಿಗೂ ಒಪ್ಪಿಗೆಯಾದ ಸೂತ್ರ. ತತ್ತ್ವದ ಅನುಸಂಧಾನ, ಅನುಭವ, ದರ್ಶನದ ಗುರಿ, "ತತ್ತ್ವ ಎಂದರೆ' 'ಅದ'ರ ಸ್ವರೂಪ ಇಲ್ಲಿ ತತ್ ಎಂಬುದು ಜಗತ್ತು ಹಾಗೂ ಜೀವನದ ಉಪಾದಾನ ಹಾಗೂ ನಿಮಿತ್ತ ಕಾರಣವಾದ ಬ್ರಹ್ಮ. ಯಾವುದರಿಂದ ಜೀವವು ಹೊಮ್ಮಿದೆಯೋ, ಯಾವುದು ಜಗತ್ತಿಗೆ ಕಾರಣವಾಗಿದೆಯೋ ಯಾವುದು ಜೀವವೂ ಜಗತ್ತೂ ತಾನೇ ಆಗಿದೆಯೋ ಯಾವುದರಲ್ಲಿ ಜೀವವೂ ಜಗತ್ತು ಲಯವಾಗುತ್ತದೆಯೋ ಅಂತಹ ಶಕ್ತಿ ವಿಶೇಷವೇ (ತತ್=) ಬ್ರಹ್ಮ. ಬ್ರಹ್ಮಾನುಸಂಧಾನ ಹಾಗೂ ಬ್ರಹ್ಮೈಕ್ಯ ಭಾರತೀಯ ತತ್ತ್ವಶಾಸ್ತ್ರದ, ವಿಶೇಷವಾಗಿ ಅದ್ವೈತ ದರ್ಶನದ ಗುರಿ. ಶ್ರೀ ಕುವೆಂಪು ಅವರು ಮನಸಾ ಸ್ವೀಕರಿಸುವುದು ಅದೇಯೆ".[೨] ಕುವೆಂಪು ಅವರು ಶ್ರೀರಾಮಾಯಣದರ್ಶನಂ ಮಹಾಕಾವ್ಯದ ಮೊದಲಲ್ಲಿ ಮಣಿಯುತ್ತದೆ. ವಿಶ್ವದ ಕಲಾಚಾರ್ಯರೆಲ್ಲರಿಗೆ ಹೋಮರ್ ಮಿಲ್ಟನ್ ಡಾಂಟೆಯರು ಅಲ್ಲಿ ನಮ್ಮ ನಾರಾಣಪ್ಪ ಪಂಪ ಕಂಬ ಕೃತ್ತಿವಾಸಾರಿಗಳೊಡನೆ ಸಮ ಪಂಕ್ತಿಯಲ್ಲಿ ನಿಂತಿದ್ದಾರೆ. ಕವಿ ಪೂಜೆಯನ್ನು ಸ್ವೀಕರಿಸುತ್ತದೆ.

"ಕಾಲದೇಶದ ನುಡಿಯ ಜಾತಿಯ ವಿಭೇದಮಂ ಲೆಕ್ಕಿಸದೆ
ಜ್ಯೋತಿಯಿರ್ಪೆಡೆಯಲ್ಲಿ ಭಗವದ್ವಿಭೂತಿಯಂ

---

೧. ಎ.ಎಸ್.ವೇಣುಗೋಪಾಲರಾವ್(ಡಾ) ದಾರ್ಶನಿಕ ಚಿಂತನೆ, ಶ್ರೀ ಕುವೆಂಪು ಅವರ ದಾರ್ಶನಿಕ ವಿಚಾರಗಳು, ರಾಷ್ಟ್ರಕವಿ ಕುವೆಂಪು ಪ್ರತಿಷ್ಠಾನ ಕುಪ್ಪಳ್ಳಿ ತೀರ್ಥಹಳ್ಳಿ , ೧೯೯೪, ಪು. ೮೮.

೨. ಅದೇ, ಪು. ೮೮.

ದರ್ಶಿಸುತೆ

ಲೋಕುಗುರು ಕೃಪೆಯಿರಲಿ ಲೋಕಕವಿ ಕೃಪೆ ಬರಲಿ"[೧]

ಇವು ಈ ಉದಾರ ವಿಶ್ವಪಥದ ಮಹತ್ವದ ಮಾತುಗಳು, ಈ ವಿಶ್ವಪ್ರಜ್ಞೆಯೇ ಶ್ರೀ ಕುವೆಂಪು ಅವರನ್ನು ಒಂದು ಜನಾಂಗದ ಒಂದು ಕಾಲದ 'ವಾಣಿ'ಯಾಗಿಯೂ ಸಾರ್ವಕಾಲಿಕ ಧ್ವನಿಯಾಗಿಯೂ ಮಾಡಿರುವುದು.

ಶ್ರೀ ಕುವೆಂಪು ಅವರು ಕಾವ್ಯಸಿದ್ದಿಯ ಧವಳ ಗೌರಿಶಂಕರದಲ್ಲಿ ಪದಾರ್ಪಣ ಮಾಡುವ ಮುನ್ನ ಅವರು ಶ್ರಮಿಸಿದ ವಿಪಿನಾಂತರ್ಗತ ಜಟಿಲ ಕುಟಿಲ ತಮ ಕರಿಚಕಿತ ಸಾಧ್ಯ ಮಾರ್ಗದ ಕಠೋರ ವ್ರತದ ಪರಿಚಯ 'ನೆನಪಿನ ದೋಣಿಯಲ್ಲಿ' ಓದುಗರಿಗೆ ಸಾಕಷ್ಟಾಗಿರುತ್ತದೆ. ಮುಂದಿನ ಮಹಾಕಾವ್ಯ ಮಹಾ ಕಾದಂಬರಿಗಳಿಗೆ ಕಾರಣವೆನ್ನಬಹುದಾದ ಸಂಗತಿಗಳೂ ಅವುಗಳಲ್ಲಿ ಹುದುಗಿವೆ ಎಂಬ ಸಂಗತಿ ಅವುಗಳ ಮೇಲೆ ಕಣ್ಣಾಡಿಸಿದವರಿಗೆ ವೇದ್ಯವಾಗದಿರದು."[೨]

"ಲೌಕಿಕ ಸಾಹಿತ್ಯವಾಗಲಿ, ಅಲೌಕಿಕ ಸಾಹಿತ್ಯವಾಗಲಿ, ದರ್ಶನದ ಮಿಂಚು ಒಂದಲ್ಲ ಒಂದು ಪ್ರಮಾಣದಲ್ಲಿ ಕುವೆಂಪು ಸಾಹಿತ್ಯದಲ್ಲೆಲ್ಲ ಹರಿದಿದೆ. ಅಲ್ಲಿ ಹಾಸುಹೊಕ್ಕಾಗಿ ಹರಿದಿರುವ ದಾರ್ಶನಿಕ ವಿಚಾರಗಳೇ ನಾಲ್ಕಾರು ಮಹಾನಿಬಂಧಗಳಿಗೆ ಗ್ರಾಸವಾಗುತ್ತವೆ."[೩] ಕುವೆಂಪು ಅವರಿಗೆ ಪ್ರಕೃತಿಯೇ ಪ್ರಥಮ ಗುರು, ಭೂಮಿ-ಗವತರಿಸುತ್ತಿದಂತೆಯೇ ಅವರಿಗೆ ಪ್ರಕೃತಿ ಕಾಮಧೇನುವಿನ ದುಗ್ಧಾಭಿಷೇಕವಾಗುತ್ತದೆ. ಬೆಳೆಯುತ್ತಿದ್ದಂತೆ ಅವರ ಆತ್ಮ ಶಿವಸತ್ಯರೂಪಿಯಾದ ನಿಸರ್ಗ ಸೌಂದರ್ಯದ ಸ್ನಾನಪಾನಾದಿಗಳಿಂದ ಉದ್ದೀಪ್ತವಾಗುತ್ತದೆ. "ರಾಮಾಯಣ ಭಾರತಗಳ ಪಠನ ಅವರ ಕಿವಿಯ ಮೇಲೆ ಬಿದ್ದಿರಬಹುದಾದರೂ ಹತ್ತು-ಹನ್ನೆರಡು ವರ್ಷದ ಬಾಲಕ ಬಾಳೆಹಣ್ಣಿನ ಸಿಪ್ಪೆಯ ನೆಪದಲ್ಲಿ ಭಗವದಿಚ್ಛೆಯ ಮೇಲೆ ಸವಾಲೆಸೆದು ಶರಣಾಗತನಾದದ್ದು ಅದ್ಭುತ ಸಂಗತಿಯೇ ಸರಿ. ಬೈಬಲ್ಲಿನ ವ್ಯಾಸಂಗ ಅವರ ಎಳೆ ಮನಸ್ಸಿನ ಮೇಲೆ ಅಚ್ಚೊತ್ತಿದ್ದರೂ, ಸ್ವಾಮಿ ವಿವೇಕಾನಂದರ ಕೃತಿರಾಶಿ ಗಂಗಾ ವಾರಿಯಲ್ಲಿ ಸಂಸ್ನಾತರಾಗಿ,

---

೧. ಎ.ಎಸ್. ವೇಣುಗೋಪಾಲರಾವ್(ಡಾ) ಶ್ರೀ ಕುವೆಂಪು ಅವರ ದಾರ್ಶನಿಕ ಚಿಂತನಾ ಪ್ರಸ್ತುತಿ, ಆಧುನಿಕ ಯುಗದಲ್ಲಿ, ಪು. ೩೮೬.

೨. ದೇಜಗೌ ಕುವೆಂಪು ಅವರ ಮಹಾದರ್ಶನ ಮತ್ತು ಪ್ರಾಯಶ್ಚಿತ್ತ, ಕುವೆಂಪು ಸಾಹಿತ್ಯ : ಕೆಲವು ಅಧ್ಯಯನಗಳು, ಸಹ್ಯಾದ್ರಿ ಪ್ರಕಾಶನ, ೧೯೮೯, ಪು. ೧೧೮.

೩. ದೇಜಗೌ ಕುವೆಂಪು ಅವರ ದಾರ್ಶನಿಕ ವಿಚಾರಗಳು, ಕುವೆಂಪು ವಿದ್ಯಾ ಪರಿಷತ್ತು ಕವಿಶೈಲ ಜಯಲಕ್ಷ್ಮಿ ಪುರಂ, ಮೈಸೂರು, ಸಹ್ಯಾದ್ರಿ ಪ್ರಕಾಶನ, ೧೯೯೫, ಪು. ೩೫.

ಪ್ರೌಢಾವಸ್ಥೆಯನ್ನು ತಲುಪುತ್ತಿದ್ದಂತೆಯೇ ವೇದೋಪನಿಷತ್ತುಗಳ ವೇದಾಂತ ದರ್ಶನ ಅವರ ಬದುಕಿನ, ಅವರ ವ್ಯಕ್ತಿತ್ವದ, ಅವರ ಎಲ್ಲ ಸಾಧನೆಯ ಅವಿಭಾಜ್ಯ ಅಂಗವಾಗುತ್ತದೆ. ಅದನ್ನು ಅವರ ನಡೆ ನುಡಿಗಳಲ್ಲಿ ಕೃತಿಗಳಲ್ಲಿ ಹಜ್ಜೆ ಹೆಜ್ಜೆಗೂ ಗುರುತಿಸಬಹುದು."[೧] ಕುವೆಂಪು ಅವರ ದಾರ್ಶನಿಕ ಚೈತನ್ಯತನ್ನೆಚ್ಚರಿಸಿ ಅವರಿಗೆ ವೇದಾಂತ ದೀಕ್ಷೆಯನ್ನು ನೀಡಿದ್ದೇ ಆ ವಿವೇಕಾನಂದ ಶಕ್ತಿ ಆ ಸಣ್ಣ ವಯಸ್ಸಿನಲ್ಲಿಯೇ ಅವರು ಜಗತ್ತಿನ ಒಂದೊಂದು ವಸ್ತುವನ್ನೂ, ಘಟನೆಯನ್ನೂ ಬ್ರಾಹ್ಮೀ ದೃಷ್ಟಿಯಿಂದಲೇ ವೀಕ್ಷಿಸುವ ಸಾಮರ್ಥ್ಯವನ್ನು ಪಡೆಯುತ್ತಾರೆ. ಅವರ ದೃಷ್ಟಿಯಲ್ಲಿ ಚಿಂತನೆಯಲ್ಲಿ, ಅವರ ಸಕಲ ವ್ಯವಹಾರಗಳಲ್ಲಿ ದಾರ್ಶನಿಕ ಧಾತುವೆ ಪ್ರಧಾನವಾಗುತ್ತದೆ"[೨] ಶ್ರೀ ರಾಮಕೃಷ್ಣರ ಸಮನ್ವಯದೃಷ್ಟಿ ಅರವಿಂದರ ಪೂರ್ಣದೃಷ್ಟಿ, ಗಾಂಧೀಜಿಯ ಸರ್ವೋದಯ ಸಿದ್ಧಾಂತಗಳಿಗೆ ಅವರು ಮಾರುಹೋಗುತ್ತಾರೆ."[೩] ಕುವೆಂಪು ಅವರ ಪ್ರಥಮ ಗುರು ನಿಸರ್ಗ. ಅವರೆಂತು ನಿಸರ್ಗದ ಒಂದು ಅವಿಭಾಜ್ಯ ಭಾಗವೇ ಅಂತೆಯೇ ನಿಸರ್ಗ ಸಹ ಅವರ ಜೀವನದ ಅವಿಭಾಜ್ಯ ಭಾಗವಾಗುತ್ತದೆ. ಭಗವಂತ ಸರ್ವವ್ಯಾಪ್ತಿ ಎಂಬ ತತ್ತ್ವವನ್ನಿವರು ಮೊದಲೊ ನಿಸರ್ಗದಿಂದಲೇ ಕಲಿಯುತ್ತಾರೆ.

"ಅಂದು ನೀ ವನಗಳಲಿ ನುಡಿದ ಪಿಸುಮಾತು
ಇಂದಿಗೂ ಮೊರೆಯುತಿದೆ ಕರ್ಣಗಳಲಿ
ಅಂದು ನೀನಡವಿಗಳಿತ್ತ ದರ್ಶನವೆ
ಇಂದಿಗೂ ತುಂಬಿಹುದು ನಯನಗಳನು"[೪]

'ದರ್ಶನವೊಂದಿರೆ ಸಗ್ಗಕೆ ಬಟ್ಟೆಹೂವಿನ ತುಂಬಿಯನು ಚುಂಬಿಪ ಚಿಟ್ಟೆ' ಎಂದಿದ್ದಾರೆ. ಗಿರಿವನಪ್ರಿಯನಾದ್ದರಿಂದಲೇ ರಾಮ ಅವರ ದೃಷ್ಟಿಯಲ್ಲಿ ಆರಾಧ್ಯ ದೇವತೆ.

"ಮಣಿಯುವೆನು ರಾಮನಡಿದಾವರೆಗೆ
ದಶಶಿರನ ವಧೆಗಾಗಿಯಾಯ್ತು:ಮಂದಾಕಿನಿಯ
ತಿಳಿವೊನಲ ಮೀಯುತಿರಲೊರ್‌ದಿನಂ ತಾಂ ಕಂಡ

೧. ದೇಜಗೌ ಕುವೆಂಪು ಅವರ ದಾರ್ಶನಿಕ ವಿಚಾರಗಳು, ಕುವೆಂಪು ವಿದ್ಯಾ ಪರಿಷತ್ತು ಕವಿಶೈಲ ಜಯಲಕ್ಷ್ಮಿ ಪುರಂ, ಮೈಸೂರು, ಸಹ್ಯಾದ್ರಿ ಪ್ರಕಾಶನ, ೧೯೯೫, ಪು. ೩೬

೨. ಅದೇ, ಪು. ೩೭

೩. ಅದೇ, ಪು. ೩೮.

೪. ಅದೇ, ಪು. ೩೯.

ದೃಶ್ಯ ಸೌಂದರ್ಯದಿಂದಾತ್ಮದರ್ಶನ ಕೇರ್ದ
ರಸ ಸಮಾಧಿಯ ಮಹಿಮೆಗಾಗಿ”[೧]

ಮಂದಾಕಿನಿಯಲ್ಲಿ ಮೀಯುವ ಶ್ರೀರಾಮನ ಅನುಭವ ಸಮಸ್ತವೂ ಕವಿಯ ಸ್ವಾನುಭವ ಹಾಗೂ ದಾರ್ಶನಿಕಾನುಭವದಿಂದಾಗಿರುವುದು, ಕುವೆಂಪು ನಿಸರ್ಗದ ಶಿಶು, ದರ್ಶನವೆ ಅವರ ಮತ, ಕಾವ್ಯವೇ ಅವರ ಪಥ, ಲೋಕ ಹಿತರಕ್ಷಣೆಯೇ ಅವರ ವ್ರತ, ಭಗವತ್ಸಾಕ್ಷಾತ್ಕಾರವೇ ಅವರ ಎಲ್ಲ ಸಾಧನೆಯ ಗುರಿಯೆಂಬುದು ಅವರ ಪ್ರತಿಯೊಂದು ವ್ಯವಹಾರಗಳಲ್ಲಿ ತಿಳಿಯುತ್ತದೆ. ಭಾರತೀಯ ಸಾಹಿತ್ಯಕ್ಕೊಂದು ದಾರ್ಶನಿಕ ಮಹಾಕಾವ್ಯವನ್ನು ನೀಡಿದ ಯಶಸ್ಸು ಕುವೆಂಪು ಅವರಿಗೆ ಸೇರಬೇಕೆನ್ನುವುದರಲ್ಲಿ ಸಂಶಯವಿಲ್ಲ. ಭಾರತೀಯರಿಗೆ ವಿಶೇಷವಾಗಿ ಕನ್ನಡಿಗರಿಗೆ ವೇದಾಂತ ದರ್ಶನದ ಬಗ್ಗೆ ಆತ್ಮಪ್ರತ್ಯಯವನ್ನು ತಂದುಕೊಟ್ಟ ಕವಿ ಎಂದರೆ ಶ್ರೀ ಕುವೆಂಪು ಎಂದು ಹೇಳಬಹುದು.

ಕುವೆಂಪು ಅವೈದಿಕ ಕುಟುಂಬದಲ್ಲಿ ಜನಿಸಿದವರಾದ್ದರಿಂದ, ಹುಟ್ಟುವಾಗಲೇ ಯಾವ ಸಿದ್ಧಾಂತಕ್ಕೂ ಅಂಟಿಕೊಳ್ಳಲಿಲ್ಲವಾದ್ದರಿಂದ ಸ್ವತಂತ್ರವಾಗಿ ಆಲೋಚಿಸುವ ಮತ್ತು ಸಾಧನೆಯಲ್ಲಿ ತೊಡಗುವ ಅವಕಾಶ ಅವರಿಗೆ ಲಭಿಸಿತು. ಉತ್ಕಟ ಹಂಬಲ, ಪ್ರಾಮಾಣಿಕ ಸಾಧನೆ, ಸೋಲುಗಳ ದೌರ್ಬಲ್ಯ, ಸಿದ್ಧಿಯ ಶಿಖರ ಇವು ಆಧ್ಯಾತ್ಮಕವಿಗೆ ಮಾತ್ರವಲ್ಲ ಎಲ್ಲ ಅಧ್ಯಾತ್ಮ ಜೀವಿಗೂ ಸಾಧಿಕನಿಗೂ ಇದ್ದದ್ದೇ. ಶ್ರೀ ಕುವೆಂಪು ಅವರಂತಹ ಆಧ್ಯಾತ್ಮಕವಿ, ಸಿದ್ಧಿಯ ಶಿಖರವನ್ನು ಮಾತ್ರವಲ್ಲ ಅವರ ಎಲ್ಲ ಸ್ತರಗಳನ್ನೂ ಅತ್ಯಂತ ಪ್ರಾಮಾಣಿಕವಾಗಿಯೇ ಚಿತ್ರಿಸಿದ್ದಾರೆ. ಶ್ರೀ ಕುವೆಂಪು ಸಮಕಾಲೀನರಂತೆ ಪಾಶ್ಚಾತ್ಯ ಕಾವ್ಯಪ್ರಕಾರಗಳನ್ನು ಛಂದಸ್ಸನ್ನು ಕನ್ನಡಕ್ಕೆ ತಂದುಕೊಂಡುದು ನಿಜವಾದರೂ ಅವರ ಕಾವ್ಯದ ಮೂಲಸತ್ವ ಸಂಪೂರ್ಣವಾಗಿ ಭಾರತೀಯವಾಗಿತ್ತು. ಕಾವ್ಯವಿಮರ್ಶೆಯಲ್ಲಂತೂ ಅವರು ಬಿ.ಎಂ.ಶ್ರೀ. ಸಂಪ್ರದಾಯವನ್ನು ಕೈಬಿಟ್ಟರೆಂದೇ ಹೇಳಬೇಕು ಎಂಬ ಮಾತು ಗಮನಾರ್ಹ.

ಕುವೆಂಪು ದರ್ಶನದಲ್ಲಿ ವಿಜ್ಞಾನ ವೇದಾಂತ ವೈಚಾರಿಕತೆಗಳ ಅಪೂರ್ವ ಸಾಮರಸ್ಯವನ್ನೂ, ಅವರ ಸಾಹಿತ್ಯದಲ್ಲಿ ಈ ಮೂರರ ಜೊತೆಗೆ ಕಾವ್ಯದ ಅಮೂಲ್ಯ ವಿಶಿಷ್ಟ ರಸ ಸಂಗಮವನ್ನು ಕಾಣಬಹುದಾಗಿದೆ. ಆದ್ದರಿಂದಲೇ ವೇದಾಂತ ದರ್ಶನವನ್ನು ವೈಜ್ಞಾನಿಕ ಪರಿಭಾಷೆಯಲ್ಲಿ ಮಾತಾಡುವುದೂ, ವಿಜ್ಞಾನಕ್ಕೆ ವೇದಾಂತದ ಪರಿವೇಶವನ್ನು ಕಟ್ಟುವುದೂ, ಅವರಿಗೆ ಸಾಧ್ಯವಾಗುತ್ತದೆ.

---

೧. ದೇಜಗೌ ಕುವೆಂಪು ಅವರ ದಾರ್ಶನಿಕ ವಿಚಾರಗಳು, ಕುವೆಂಪು ವಿದ್ಯಾ ಪರಿಷತ್ತು ಕವಿಶೈಲ ಜಯಲಕ್ಷ್ಮಿ ಪುರಂ, ಮೈಸೂರು, ಸಹ್ಯಾದ್ರಿ ಪ್ರಕಾಶನ, ೧೯೯೫, ಪು. ೩೯.

ಮಾನವ ನಿಸರ್ಗದ ಶಿಶು. ಅದೇ ಅವನನ್ನು ಪೋಷಿಸುವ ತಾಯಿ, ಕಲಿಸುವ ಗುರು, ಅದಿಲ್ಲದೆ ಮನುಷ್ಯನ ಬದುಕು ನಡೆಯುವಂತಿಲ್ಲ. "ನಿಸರ್ಗದ ಮಡಿಲಲ್ಲಿ ಹುಟ್ಟಿದ ಕುವೆಂಪು ಅವರಿಗೆ ಅದು ತಂದೆ ತಾಯಿಗುರುಗಳೆಂದು ಆರಾಧ್ಯಶಕ್ತಿ ಸಮಸ್ತವೂ ಆಗಿದೆ. ಲೌಕಿಕ ಪ್ರಯೋಗದಿಂದ ಹಿಡಿದು ಸೌಂದರ್ಯಾತ್ಮಕವಾದ ಬ್ರಹ್ಮಾನಂದಾನುಭೂತಿಯನ್ನೊದಗಿಸುವ ಸಾಧನವೂ ಆಗಿದೆ. 'ಮಲೆಯ ನಾಡೆನಗೆ ತಾಯಿ ಮನೆ, ಕಾಡು ದೇವರ ಬೀಡು, ಗಿರಿಯ ಮುಡಿ ಶಿವನು, ಗುಡಿ, ಬನವೆಣ್ಣೆ ಮೊದಲಿನಾ ಮನದನ್ನೆ' ಎಂಬ ಕವಿವಾಣಿಯಲ್ಲಿ ಹುಸಿಯಿಲ್ಲ"[೧] ಕಾನೂರು ಹೆಗ್ಗಡಿತಿ ಮಲೆನಾಡಿನ ಮಹಾಭಾರತವೆಂದು ಅನಕೃ ಕರೆದದ್ದುಂಟು. ಅಲ್ಲಿಯ ಬಡವ ಬಲ್ಲಿದರು ಮಾತ್ರವಲ್ಲ ಪ್ರಾಣಿ, ಪಕ್ಷಿ, ತರು, ಹೊಳೆ, ಕೆರೆ, ಮೋಡ, ಮಿಂಚು, ಮಳೆ, ಸೂರ್ಯ ಚಂದ್ರಾದಿ ಚೇತನಾ ಚೇತನ ವಸ್ತುಗಳೂ, ಪ್ರಕೃತಿ ವ್ಯಾಪಾರಗಳೂ ಆ ಮಹಾಭಾರತದಲ್ಲಿ ಭಾಗವಹಿಸುತ್ತವೆ. ಚಂದ್ರಮೌಳೇಶ್ವರನ ಜತೆಗೆ ದೆವ್ವ ಭೂತ ಜಕ್ಕಣಿ ಪಂಜ್ರೊಳ್ಳಿ ಮೊದಲಾದ ಅಂತರ ಬೆಂತರಗಳಿಗೂ ಅಲ್ಲಿ ತಾವುಂಟು. ಈ ಕಾದಂಬರಿಯ ಮೂಲಕ ಹಲವು ಪ್ರಾಣಿಪಕ್ಷಿ ವೃಕ್ಷಗಳು ಮೊತ್ತಮೊದಲಿಗೆ ಕನ್ನಡ ಸಾಹಿತ್ಯವನ್ನು ಪ್ರವೇಶಿಸುತ್ತವೆ. ನಿಸರ್ಗದ ಗರ್ಭದಿಂದಲೇ ಈ ಕಾದಂಬರಿ ಮೂಡಿಬಂದಿದೆ.

ಕುವೆಂಪು ಆಧುನಿಕ ಕನ್ನಡ ಸಾಹಿತ್ಯದ ನಿರ್ಮಾಪಕರಲ್ಲೊಬ್ಬರು. ಮಾತ್ರವಲ್ಲ, ಕನ್ನಡ ಸಾಹಿತ್ಯವನ್ನು ನೋಡಬೇಕಾದ ದೃಷ್ಟಿಕೋನವನ್ನು ಕನ್ನಡಿಗರಿಗೆ ನೀಡಿದವರು. ಕವಿ, ದಾರ್ಶನಿಕ, ವಿಮರ್ಶಕ, ಪ್ರಾಧ್ಯಾಪಕ, ಆಡಳಿತಗಾರನಾಗಿ ಒಂದು ಕಡೆ ಮಹತ್ವದ ಗದ್ಯಕಾರನಾಗಿ ಇನ್ನೊಂದು ಕಡೆ ಅವರು ಕನ್ನಡಕ್ಕೆ ನೀಡಿದ ಕೊಡುಗೆ ಯಾವ ಸಿದ್ಧಾಂತದ, ಯಾವ ಮಾನದಂಡದ ಮೂಲಕವೂ ನಗಣ್ಯವಾಗುವಂಥಾದ್ದಲ್ಲ. ನವ್ಯದ ಉಚ್ಛ್ರಾಯ ಕಾಲದಲ್ಲಿ ಕುವೆಂಪು ಅವರ ಶ್ರೀ ರಾಮಾಯಣ ದರ್ಶನಂ' ಮಹಾಕಾವ್ಯದಲ್ಲಿ ಬರುವ ತನ್ನ ಕಾವ್ಯಕ್ಕೆ ತಾಂ ಮಹಾಕವಿ ಕುಣಿಯುವಂತೆ' ಎಂಬ ಉಪಮೆಯಲ್ಲಿ ಕವಿಯ ಸದ್ವಿನಯ ದುರಹಂಕಾರವಾಗಿ ಕೆಲವು ಲೇಖಕರಿಗೆ ಕಂಡದ್ದಿದೆ. ಕನ್ನಡ ಸಾಹಿತ್ಯದ ಯಾವುದೋ ಕೆಲವು ತುಣುಕುಗಳನ್ನು ಗಮನಿಸಿ ಇಡಿಯ ಕನ್ನಡ ಸಾಹಿತ್ಯ ಪರಂಪರೆಯ ಬಗ್ಗೆ ತೀರ್ಮಾನ ಕೈಗೊಳ್ಳುತ್ತಿದ್ದ ಪಶ್ಚಿಮ ಮುಖಿಗಳ, ವಿಕ್ಷಿಪ್ತರ ಸುವರ್ಣಯುಗ ಅದಾಗಿತ್ತು. ಹಾಗಾಗಿ ಕುವೆಂಪು ಕಾವ್ಯದ ಬಗೆಗಾಗಲಿ, ಅವರ ಗದ್ಯ ಸಾಹಿತ್ಯ–ಕಾದಂಬರಿಗಳ ಬಗೆಗಾಗಲಿ ಸಮತೂಕದ ವಿಮರ್ಶೆ ಆ ಕಾಲದಲ್ಲಿ ಬರದಂತಾಯಿತು. ಕುವೆಂಪು ಕವಿಯಾಗಿ ಬೇಂದ್ರೆಯಷ್ಟು ನಮಗೆ ಸ್ಫೂರ್ತಿಶೀಲ

---

೧. ದೇಜಗೌ, ಕುವೆಂಪು ದರ್ಶನ, ಕಾನೂರು ಹೆಗ್ಗಡತಿಯಲ್ಲಿ ಪ್ರಕೃತಿವರ್ಣನೆ, ಪ್ರಸಾರಾಂಗ ಕನ್ನಡ ವಿ.ವಿ. ಹಂಪಿ, ೨೦೦೮, ಪು. ೬೧೨. ೧೯೯೫, ಪು. ೩೫.

ರಾಗಲಾರರೆಂದು ತಿಳಿದ ನವ್ಯ ಸಾಹಿತಿಗಳು, ಕುವೆಂಪು ಬರೆಯುತ್ತಿದ್ದಾಗಿನ ಕನ್ನಡದ ಸ್ಥಿತಿಗತಿಗಳನ್ನು ಅವರ ಸಾಮಾಜಿಕ ಹಿನ್ನೆಲೆಯನ್ನು ನಿರ್ಲಕ್ಷಿಸುತ್ತಾರೆ. ಅವರ ಸಾಹಿತ್ಯ ಸೃಷ್ಟಿಯ ವೈವಿಧ್ಯ ಮತ್ತು ಅಗಾಧತೆಯನ್ನು ಗಮನಿಸಿಲ್ಲ. ಅದಕ್ಕಿಂತ ಮುಖ್ಯವಾಗಿ ಅವರ ಎಲ್ಲ ಪ್ರಕಾರಗಳ ಸಾಹಿತ್ಯ ನಿರ್ಮಿತಿಯೊಳಗಿನ ಜೀವನ ದರ್ಶನದಲ್ಲಿನ ಅಖಂಡತೆಯನ್ನು ಐಕ್ಯತತ್ತ್ವವನ್ನು ತಿಳಿಯುವ ಗೋಜಿಗೇ ಹೋಗಿಲ್ಲ.

ಇಂಗ್ಲಿಷ್ ನಾಟಕಗಳನ್ನು ಯತಾವತ್ತಾಗಿ ಅನುವಾದಿಸದೆ ಕನ್ನಡದ ಜಾಯಮಾನಕ್ಕೆ ಹೊಂದುವಂತೆ ಮೂಲಕಥೆಯನ್ನು ಸ್ಥೂಲಭಿತ್ತಿಯಾಗಿ ಮಾತ್ರ ಇರಿಸಿಕೊಂಡು ಅವರು ಪ್ರಕಟಿಸಿದ ಸ್ವಂತಿಕೆ ಮೆಚ್ಚಬೇಕಾದುದು. ಆಂಗ್ಲ ಸಾಹಿತಿಗಳ ಪರಿಭಾಷೆ, ಪ್ರತಿಮೆ, ನುಡಿಗಟ್ಟುಗಳನ್ನು ಉಂಡುಂಡೆಯಾಗಿ ಕಬಳಿಸಿದ ಅವರ ವಿಷಯ ಪ್ರತಿಪಾದನೆಯ ಶೈಲಿಯನ್ನೂ ಅನುಸರಿಸಿದ, ಕನ್ನಡ ಸಾಹಿತ್ಯದ ಪರಂಪರೆಗೆ ಹೊಂದದ ಹಾಗೂ ಸಾಮಾಜಿಕ ವಾಸ್ತವವನ್ನೇ ಧಿಕ್ಕರಿಸಿದ ನವ್ಯ ಸಾಹಿತಿಗಳಿಗೆ ಕುವೆಂಪು ಅವರ ಸೃಜನ ಕ್ರಿಯೆಯ ವೈಶಿಷ್ಟ್ಯ ಅರ್ಥವಾಗಲಾರದೆನಿಸುತ್ತದೆ. ಸಾಹಿತಿ ತನ್ನ ಖಾಸಾ ಅನುಭವಕ್ಕೆ ನಿಷ್ಠನಾಗಬೇಕು. ತನ್ನ ಅನುಭವಗಳ ಶೋಧನೆಗಿಳಿಯಬೇಕು ಮುಂತಾದ ನವ್ಯರ ಘೋಷಣೆ ಕೃತಿರಚನೆಯ ಸಂದರ್ಭದಲ್ಲಿ ಕೈಗೂಡದಂತಾದುದು ಒಂದು ವಿಪರ್ಯಾಸ.

ಒಬ್ಬ ಲೇಖಕ ಬರೆದ ಪ್ರತಿಯೊಂದು ಬರಹವೂ ಶ್ರೇಷ್ಠವಾಗಲಾರದು. ಅಥವಾ ಒಂದೇ ಗ್ರಂಥದೊಳಗಿನ ಎಲ್ಲ ಪುಟಗಳೂ ಸಾಲುಸಾಲುಗಳೂ ರಸಭಾವಾಗಳಿಂದ ಬಿರಿಯುವಷ್ಟು ಸತ್ವಪೂರ್ಣವಾಗಿರಲಾರವು. ಹಾಗೇ ನೋಡಿದಾಗ ಕುವೆಂಪು ಅವರಿಗಿಂತ ಹೆಚ್ಚು ಸಂಖ್ಯೆಯ ಉತ್ಕೃಷ್ಟ ಕವಿತೆಗಳನ್ನು, ಬೇಂದ್ರೆ ಕೊಟ್ಟಿರ–ಬಹುದಾದರೂ ಕುವೆಂಪು ಅವರ ಬರವಣಿಗೆಯ ವೈವಿಧ್ಯವನ್ನು ನಾವು ಕಡೆಗಣಸಬಾರದು. ಸ್ವತಃ ಅಡಿಗರಂತ ನವ್ಯರ ನೇತಾರರೆನಿಸಿದ ಕವಿಗಳೂ ಉತ್ಕೃಷ್ಟವೂ ಯಶಸ್ವಿಯೂ ಆದ ಏಳೆಂಟು ಕವಿತೆಗಳನ್ನಷ್ಟೇ ಕೊಟ್ಟಿದ್ದಾರೆ. ಇತ್ತೀಚೆಗೆ ಜ್ಞಾನಪೀಠ ಪ್ರಶಸ್ತಿಗೆ ಪಾತ್ರರಾದ ಅನಂತಮೂರ್ತಿಯವರು ಕೂಡ ನಾಲ್ಕಾರು ಕತೆಗಳು ಮತ್ತು 'ಸಂಸ್ಕಾರ'ದಲ್ಲಿ ಮೆರೆದ ಉತ್ಕೃಷ್ಟ ಕಲೆಗಾರಿಕೆಯನ್ನು ತಮ್ಮೆಲ್ಲ ಕೃತಿಗಳಲ್ಲೂ ಅಖಂಡವಾಗಿ ಕಾದುಕೊಂಡು ಬಂದಿಲ್ಲ ಎನ್ನುವುದನ್ನು ಮರೆಯಬಾರದು.

ಸಾಹಿತ್ಯ ಸೃಷ್ಟಿಯ ಬೃಹತ್ ಗಾತ್ರವನ್ನು ಗಮನಿಸದೆ ಬಿಡಿಬಿಡಿ ಕವಿತೆಯನ್ನೋ ಕತೆಯನ್ನೋ ಎತ್ತಿಕೊಂಡು ಪ್ರಾಯೋಗಿಕ ವಿಮರ್ಶೆಯ ಹೆಸರಿನಲ್ಲಿ ಕೂದಲು ಸೀಳುವ ವೃತ್ತಿಗಿಳಿದ ನವ್ಯ ವಿಮರ್ಶಕರಿಗೆ ಕುವೆಂಪು ಅವರ ಕಾದಂಬರಿಗಳ ಕ್ಯಾನ್ವಾಸ್, ಅದರ

ಹಿಂದಿನ ಜೀವನಾನುಭವದ ಅಗಾಧತೆ ಹಾಗೂ ದರ್ಶನ ಅಪ್ರಸ್ತುತವಾದುದರ ರಹಸ್ಯ ಇಂದು ಬಯಲಾಗಿಬಿಟ್ಟಿದೆ. ಸ್ವತಃ ನವ್ಯ ಲೇಖಕರಾದ ಎಚ್.ಎಂ.ಚನ್ನಯ್ಯ ನವ್ಯ ವಿಮರ್ಶಕರು ಕುವೆಂಪು ಕಾವ್ಯಕ್ಕೆ ಎಸಗಿದ ಅನ್ಯಾಯವನ್ನು ವಿಶ್ಲೇಷಿಸಿದ್ದರಲ್ಲದೆ ಕುವೆಂಪು ಅವರ 'ಪಕ್ಷಿಕಾಶಿ' ಕವಿತೆಯ ಮಹತ್ವವನ್ನು ಸೊಗಸಾಗಿ ತೋರಿಸಿಕೊಟ್ಟಿದ್ದಾರೆ. ಅವರನ್ನು ಟೀಕೆ ಮಾಡುವ ವಿಮರ್ಶಕರು ಅವರ ಉತ್ತಮ ಗೀತೆಯನ್ನು ಗಮನಿಸಿದಾಗಲೂ ಅದನ್ನು ಸರಿಯಾಗಿ ಗಮನಿಸುವಲ್ಲಿ ತಪ್ಪು ಮಾಡಲಾಗಿದೆ ಎಂದು ತೋರುತ್ತದೆ. ಉದಾಹರಣೆಗೆ ಶ್ರೀ ಕೆ.ಡಿ.ಕುರ್ತುಕೋಟಿಯವರು 'ಪಕ್ಷಿಕಾಶಿ' ಕವನದ ಬಗೆಗೆ ಹೇಳುವ ಈ ಮಾತುಗಳನ್ನು ಗಮನಿಸಿ 'ಇಲ್ಲಿ ಹುಗಲಿಲ್ಲ ನಿನಗೆ ಓ ಬಿಯದ ಇದು ಪಕ್ಷಿಕಾಶಿ' – ಇಂಥಲ್ಲಿ ಚಿತ್ರಗಳು ಸ್ಪಷ್ಟವಾಗುವುದಿಲ್ಲ"[೧] ಎಂದು ಆ ಕವನವನ್ನು ತಳ್ಳಿಹಾಕುತ್ತಾರೆ. ಆದರೆ ಎಚ್.ಎಂ.ಚನ್ನಯ್ಯನವರು 'ಪಕ್ಷಿಕಾಶಿ' ಕವಿತೆಯ ಮಹತ್ವವನ್ನು ತೋರಿಸಿಕೊಟ್ಟಿದ್ದಾರೆ. ಆ ಕವನವನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ ಅರ್ಥಪೂರ್ಣವಾದ ಪ್ರತಿಮಾ ಬೆಳವಣಿಗೆ ಅಲ್ಲಿದೆ ಎನಿಸುತ್ತದೆ. ಆ ಕವನ ಹೀಗಿದೆ:

"ಇಲ್ಲಿ ಹುಗಲಿಲ್ಲ ನಿನಗೆ ಓ ಬಿಯದ;
ಇದು ಪಕ್ಷಿಕಾಶಿ!
ದೇವನದಿಯಲ್ಲಿ ದ್ವೀಪಕೃಪೆಯಲ್ಲಿ
ಭಾವತರುವಾಸಿ
ಪ್ರಾಣಪಕ್ಷಿ ಕಾಲವಿರಹುದು ರಕ್ಷೆಯಲಿ
ನಿತ್ಯಮವಿನಾಶಿ
ಶಕ್ತಿಸುತ್ತಲೂ ಕಾವಲಿಹುದು ಕಾಣ್
ಅಗ್ನಿ ಜಲರಾಶಿ!
ಕೊಲ್ವ ಬತ್ತಳಿಕೆ ಬಿಲ್ಲು ಬಾಣವನು
ಅಲ್ಲೆ ಇಟ್ಟು ಬಾ;
ಬಿಂಕದುಕುತಿಯನು ಕೊಂಕುಯುಕುತಿಯನು
ಎಲ್ಲ ಬಿಟ್ಟು ಬಾ;
ಮೈಯ ತೊಳೆದು ಬಾ, ಕೈಯ ಮುಗಿದು ಬಾ
ಹಮ್ಮನುಳಿದು ಬಾ
ಇಕ್ಷು ಮದುರಮೆನೆ ಮೋಕ್ಷ ಪಕ್ಷಿಯುಲಿ

೧. ಕೆ.ಟಿ.ಕುರ್ತುಕೋಟಿ, ಕನ್ನಡ ಸಾಹಿತ್ಯ ದರ್ಶನ, ಪು. ೬೫, ಮನೋಹರ್ ಗ್ರಂಥಮಾಲೆ, ಧಾರವಾಡ, ೨೦೦೨.

ನಾಡಿನಾಡಿಯಲಿ ಹಾಡಿ ಹರಿದು ನಲಿ

ದಾಡಬಹುದು ಬಾ

ಪಕ್ಷಿಕಾಶಿ – ಈ ಪದವನ್ನು ಗಮನಿಸಿ ಇದು ಕೇವಲ ಪಕ್ಷಿಸಂಕುಲವಿರುವ ಕಾಡಲ್ಲ. ಇದು ಪಕ್ಷಿಕಾಶಿ ಎಂಬ ಪದಕ್ಕೆ ಹಿಂದೂ ಸಂಸ್ಕೃತಿಯ ಸಂದರ್ಭದಲ್ಲಿ ಎಂಥ ಒಂದು ಅರ್ಥದ ಪರಿವೇಷ ಬರುತ್ತದೆ. ಕೊಲ್ವ ಬತ್ತಳಿಕೆ ಬಿಲ್ಲುಬಾಣ' ಬಿಂಕದುಕುತಿ ಕೊಂಕುಯುಕುತಿ ಇವು ಇಲ್ಲಿ ನಿಷ್ಪ್ರಯೋಜಕ ಆದ್ದರಿಂದ 'ಬಿಯದ' ನಾದವನು ಅವುಗಳನ್ನು ಬಿಟ್ಟು ಮೈತೊಳೆದು ಬರಬೇಕು. ಭಾವಪಕ್ಷಿ – ಪ್ರಾಣಿಪಕ್ಷಿ – ಮೋಕ್ಷಪಕ್ಷಿ ಹೀಗೆ ಅದರ ಬೆಳವಣಿಗೆ ಆಗಿದೆ''[೧] ಎಂದು ಹೇಳಬಹುದು. ಅಲ್ಲದೆ ಈ ವಿಮರ್ಶಕರು ಕುವೆಂಪು ಅವರ ಉತ್ತಮವಲ್ಲದ ಕವಿತೆಗಳನ್ನೇ ಆರಿಸಿ ಉತ್ತಮ ಕವಿತೆಗಳನ್ನು ನಿರ್ಲಕ್ಷಿಸಿ ಅವರ ಒಟ್ಟಾರೆ ಕಾವ್ಯದ ಬಗೆಗೆ ತೀರ್ಮಾನ ಪ್ರಶ್ನಿಸಿದರೆ ಚನ್ನಯ್ಯ ಅವರ ಪ್ರಕಾರ ಧರ್ಮದ ಆಚರಣೆಯ ಮಟ್ಟದಲ್ಲಿರುವ ವಿರೋಧ ಭಾಷೆಗಳನ್ನು, ದ್ವಂದ್ವಗಳನ್ನು ತಿವ್ರವಾಗಿ ಖಂಡಿಸಿದರೂ ಕುವೆಂಪು ಅವರಿಗೆ ಧರ್ಮದ ಇನ್ನೊಂದು ಮುಖವಾದ ಆಧ್ಯಾತ್ಮಿಕತೆಯ ಬಗೆಗೆ ಅಷ್ಟೇ ಗೌರವ ಮತ್ತು ವೈಚಾರಿಕವಾಗಿ ಏನನ್ನು ಹೇಳಿದರೂ ಅದನ್ನೇ ಸ್ಪಷ್ಟಾತ್ಮಕ ಬರವಣಿಗೆಯಲ್ಲಿ ಅವರು ವಿಶ್ಲೇಷಿಸಿದರು''[೨] ಎನ್ನುಬಹುದು.

ಕುವೆಂಪು ಅವರ ಆಧ್ಯಾತ್ಮಿಕತೆ ಸಾಮಾಜಿಕ ವಾಸ್ತವಕ್ಕೆ ಐಹಿಕ ಸಂವೇಧನೆಗಳಿಗೆ ಮತ್ತು ನಿಸರ್ಗದ ಸೌಂದರ್ಯಕ್ಕೆ ವಿಮುಖವಾದದ್ದಲ್ಲ. ಪ್ರತಿಯಾಗಿ ಇವೆಲ್ಲವುಗಳಿಗೆ ಒಂದು ಪರಿವಲಯವನ್ನು ಕಟ್ಟಿಕೊಡುವ ಬಗೆಯಿದು. ಪೂರ್ಣದೃಷ್ಟಿ, ರಸೋ ವೈಸಃ ಪ್ರಕೃತಿಯೊಲ್ಮೆಯ ಪರಮನಾರಾಧನೆ, ವಿಶ್ವಪಥ ಮನುಜಮತ, ನಿರಂಕುಶ ಮತಿಗಳಾಗಿ ಮುಂತಾದ ಕುವೆಂಪು ಸೂಕ್ತಿಗಳು, ಶೀರ್ಷಿಕೆಗಳು ಅವರ ಒಟ್ಟು ದರ್ಶನದ ಜೀವಂತ ಭಾಗಗಳಾಗಿವೆ. ಮಾತ್ರವಲ್ಲ ಈ ಜೀವನದರ್ಶನ ಅವರ ಎಲ್ಲ ಕೃತಿಗಳಲ್ಲಿ, ಕಾವ್ಯ–ಕಾದಂಬರಿ, ವೈಚಾರಿಕ ಮತ್ತು ವಿಮರ್ಶೆ ಅಖಂಡವಾಗಿ ಮೈಯೆತ್ತಿದೆ. ಈ ಅಖಂಡವಾದ ಜೀವನ ದರ್ಶನ ಕುವೆಂಪು ಸಾಹಿತ್ಯದ ಪ್ರಮುಖ ಅಂಶವಾಗಿದೆ.

ಕುವೆಂಪು ಶೂದ್ರ ಸಮುದಾಯರಿಂದ ಬಂದ ಮೊದಲ ಆಧುನಿಕ ಕವಿ. ಅವರು ತನ್ನನ್ನು ತಾನು ಕಾವ್ಯಲೋಕದಲ್ಲಿ ಸ್ಥಾಪಿಸಿಕೊಳ್ಳಲು ಪ್ರಧಾನವಾಗಿ ಕಾವ್ಯ,

---

೧. ಎಚ್.ಎಂ.ಚನ್ನಯ್ಯ, ಕುವೆಂಪು ಸಾಹಿತ್ಯ ಒಂದು ಪುನರ್ ವಿಮರ್ಶೆ, ಪು. ೪೪೧, ಕನ್ನಡ ಸಾಹಿತ್ಯ ಪರಿಷತ್ತು, ಬಾಗಲಕೋಟೆ, ಬೆಂಗಳೂರು, ೨೦೧೦.

೨. ಡಾ. ಆರ್ಕೆ ಮಣಿಪಾಲ, ಕುವೆಂಪು ದರ್ಶನ, ಎಷ್ಟು ಪ್ರಸ್ತುತ? ಪು. ೪೯೧, ಸಹ್ಯಾದ್ರಿಯ ಸೂರ್ಯ, ಕಸಾಪ, ಬೆಂಗಳೂರು, ೨೦೧೦.

ಖಂಡಕಾವ್ಯ, ನಾಟಕ ಮತ್ತು ಮಹಾಕಾವ್ಯದ ಪ್ರಕಾರಗಳನ್ನು ಆರಿಸಿಕೊಂಡರು. ಈ ಆಯ್ಕೆ ಅವರ ವೈಯಕ್ತಿಕ ಭಾವವ್ಯಾಪಾರಗಳಿಗೆ ಸಂಬಂಧಿಸಿದಷ್ಟೇ ಆಗಿರದೆ ತತ್ಕಾಲೀನ ಕನ್ನಡ ಭಾಷೆ, ಸಾಹಿತಿಗಳ ಸ್ವರೂಪಕ್ಕೆ ಸೃಜನಶೀಲ ಉದ್ದೇಶಗಳಿಗೆ ಕೂಡ ಲಗತ್ತಾಗಿದೆ ಎಂದೆನಿಸುತ್ತದೆ. ಪೌರಾಣಿಕ ಚೌಕಟ್ಟುಗಳ ರಾಮಾಯಣ ದರ್ಶನದಲ್ಲಿ ಕವಿಗೆ ವಿಶೇಷ ಸ್ವಾತಂತ್ರ್ಯವಿಲ್ಲವಾದರೂ ನಿರೂಪಣಾ ರೀತಿ, ಛಂದಸ್ಸು, ಭಾಷೆ, ಪ್ರತಿಮೆಗಳಲ್ಲಿ ಹಾಗೂ ಅವರ ಕಾವ್ಯದ ಘನೋದ್ದೇಶವಾಗಿ ಬಳಕೆಯಾಗುತ್ತಿದ್ದ ದರ್ಶನದಲ್ಲಿ ಹೊಸತನವಿದೆ. ರಾವಣನನ್ನು ಏಕೆ, ಊರ್ಮಿಳೆ–ಮಂಡೋದರಿ–ಕೈಕೆ–ಮಂಥರೆಯಂಥವರನ್ನು ಅವರು ಕಲ್ಪಿಸಿಕೊಂಡ ಬಗೆ ನೂತನವಾಗಿದೆ. ಅವರು ಮೈಗೂಡಿಸಿಕೊಂಡ ಜೀವನದರ್ಶನ ಬಹುಶಃ ಇಂಥ ಪೌರಾಣಿಕ ವಸ್ತುವಿನಲ್ಲಿ ಘನವಾಗಿ ಪ್ರಕಟಗೊಳ್ಳುವುದು ಅನಿವಾರ್ಯವಾಯಿತು. ರಾವಣನನ್ನು ಖಳನಾಯಕನಾಗಿಯಷ್ಟೇ ಕಲ್ಪಿಸುತ್ತಾ ಬಂದ ವೈದಿಕ ಪರಂಪರೆಗೆ ವಿರುದ್ಧವಾಗಿ ದುರಂತನಾಯಕನೆಂಬ ಬಗೆಯಲ್ಲಿ ಚಿತ್ರಿಸಿದ ವೈದಿಕೇತರ (ಜೈನ–ಬೌದ್ಧ–ಜಾನಪದ) ಪರಂಪರೆಯ ಆಶಯ ಇಪ್ಪತ್ತನೇ ಶತಮಾನದ ಮಹಾಕಾವ್ಯದ ಕುವೆಂಪು ರಾಮಾಯಣದಲ್ಲಿ ಹೀಗೆ ಸಮಗ್ರವಾಗಿ ಜೀವತಳೆದುದು ಸಾಮಾನ್ಯ ಸಂಗತಿಯೇನಲ್ಲ. "ಕುವೆಂಪು ಅವರ ಶ್ರೀ ರಾಮಾಯಣ–ದರ್ಶನಂ" ಪರಮೋದಾರವು ಆದ ಹೊಸಕಾಲಕ್ಕೆ ದಿಟವಾಗಿ ಅತ್ಯಪೇಕ್ಷಣೀಯವಾಗಿರುವ ಜೀವನ ದೃಷ್ಟಿಯಿಂದಾಗಿ ಒಂದು ಹೃದಯಂಗಮ ಕಾರುಣ್ಯ ಗಾಥೆಯಾಗಿದೆಯೆಂಬುದು ನಿಜ. ಸಂಪನ್ನವಾದ ಕಾವ್ಯಕಲೆ ಪ್ರಕೃತಿಸಹಜವಾಗಿ ಎನ್ನುವಂತೆ ಅವಳಿ ಪರಿಮಳಿಸಿರುವ ಒಂದು ಉತ್ಕೃಷ್ಟ ಕಲಾಕೃತಿಯಾಗಿದೆ ಎನ್ನಬಹುದು ನಿಜ. ಪ್ರತಿಭೆ ಪಾಂಡಿತ್ಯಗಳು ಹದವಾಗಿಯೂ ಮೇಲಾಗಿಯೂ ಮೇಳವಿಸಿರುವ ಭಾಷೆಶೈಲಿಗಳ ಬಂಧುಕತೆಗೆ ಅಪೂರ್ವವಾದ ಮಾದರಿಯಾಗಿ ಪರಿಣಮಿಸಿರುವ ಹೊಸಗನ್ನಡದ ಕಾವ್ಯೇತಿಹಾಸದ ಈ ಅಗ್ರಗಣ್ಯ ಮಹಾಕಾವ್ಯದಿಂದ ಕನ್ನಡ ಭಾಷೆ ಸಂಸ್ಕೃತಿಗಳು ಸಂಪದ್ಯುಕ್ತವಾಗಿವೆ. ಸತ್ತ್ವಶಾಲಿಯಾಗಿವೆ"[೧] ಎಂದರೆ ಆಶ್ಚರ್ಯ ವಾಗಲಾರದು.

ಅವರ ಒಟ್ಟು ಸಾಹಿತ್ಯದ ಸ್ವರೂಪವನ್ನು ಗಮನಿಸಿದರೂ 'ಬೆರಳ್‌ಗೆ ಕೊರಳ್' – 'ಚಿತ್ರಾಂಗದಾ', ಅಮಲನಕತೆ', 'ಸನ್ಯಾಸಿ ಮತ್ತು ಇತರ ಕತೆಗಳು'–ಅವರು ಆರಿಸಿಕೊಳ್ಳುತ್ತಿದ್ದ ವಸ್ತು ಮತ್ತು ಅದನ್ನು ನಿರ್ವಹಿಸುತ್ತಿದ್ದ ರೀತಿ ಹಾಗೂ ವ್ಯಂಜಿಸಿದ ಜೀವನದರ್ಶನ ಅಸಾಧಾರಣವಾದುದು. ಈ ದೃಷ್ಟಿಯಿಂದ ಪರಂಪರೆಯ ಅತ್ಯುತ್ತಮ–ವಾದುದನ್ನು ಗ್ರಹಿಸಿ ಅದನ್ನು ಮುಂದುವರಿಸುವ ಪ್ರಕ್ರಿಯೆಯಲ್ಲೇ ಸ್ವಂತಿಕೆಯ ಛಾಪು

---

೧. ಡಾ. ಟಿ.ವಿ.ವೆಂಕಟಚಲಶಾಸ್ತ್ರೀ, ಕುವೆಂಪು ಶ್ರೀ ರಾಮಾಯಣ ದರ್ಶನಂ, ಪು. ೨೫೬, ಅನಿಕೇತನ, ಸ್ವಪ್ನ ಬುಕ್ ಹೌಸ್, ಬೆಂಗಳೂರು, ೨೦೦೫.

ಹೊಡೆಯುವ ಅವರ ಸೃಜನಶಕ್ತಿ ಕನ್ನಡ ಸಾಹಿತ್ಯದ ವಿದ್ಯಾರ್ಥಿಗಳು ಗಂಭೀರವಾಗಿ ಅಧ್ಯಯನ ಮಾಡಬೇಕಾದುದು. ಪೌರಾಣಿಕ ಚೌಕಟ್ಟಿನೊಳಗೇ ಸಮಕಾಲೀನ, ಚಾರಿತ್ರಿಕ ಸಂಗತಿಗಳನ್ನು ಒಡಬೆರೆಸುವ ಈ ಸಂಪ್ರದಾಯ, ಕನ್ನಡದಲ್ಲಿ ಪಂಪನಿಂದ ತೊಡಗಿ ಕುವೆಂಪು ಅವರವರೆಗೂ ಮುಂದುವರಿದುದು ಹೀಗೆ.

ಕುವೆಂಪು ಕವಿಗಿಂತ ಮೇಲಾಗಿ ಗದ್ಯಕಾರನೆಂದು ತಿಳಿದ ನವ್ಯ ವಿಮರ್ಶಕರು ಅವರ ಎರಡೂ ಕಾದಂಬರಿಗಳನ್ನು ಮಹತ್ವದ ಕೃತಿಗಳೆಂದು ಮಾನ್ಯ ಮಾಡಿದ್ದಾರೆ. ೧೯೩೬ರಷ್ಟು ಆಚೆಗೆ ಹೊರಬಿದ್ದ 'ಕಾನೂರುಹೆಗ್ಗಡತಿ'ಗಿಂತ ೧೯೬೭ರಲ್ಲಿ ಪ್ರಕಟವಾದ 'ಮಲೆಗಳಲ್ಲಿ ಮದುಮಗಳು" ಹೆಚ್ಚು ಉತ್ತಮವೆಂದು ಇವರೆಲ್ಲರೂ ಉತ್ತರಿಸುತ್ತಾ ಬಂದಿದ್ದಾರೆ. ಆದರೆ ಅಸಂಖ್ಯ ಸನ್ನಿವೇಶಗಳು, ಅಪಾರ ವಿವರಗಳು ಇಡಿಕಿರಿದಿರು-ವುದರಿಂದ ಹಾಗೂ ಪಾತ್ರ ಪ್ರಧಾನ ಕಾದಂಬರಿಗಳಲ್ಲವಾದ್ದರಿಂದ ಇವುಗಳಲ್ಲಿ ಕೇಂದ್ರಸ್ಥ ಧೋರಣೆಯಿಲ್ಲವೆಂಬುದು ಈ ವಿಮರ್ಶಕರ ಅಕ್ಷೇಪ. ಈ ಎರಡೂ ಆಕ್ಷೇಪಗಳೂ ಸಮಂಜಸವಾದುದಲ್ಲ. ಎರಡನೆಯದಂತೂ ವಿಮರ್ಶೆಯೇ ಅಲ್ಲ ಪೂರ್ವಗ್ರಹ ದೂಸಿತ ಕ್ಷುಲ್ಲಕ ಟೀಕೆ ಎನ್ನಬೇಕಾಗುತ್ತದೆ.

ಕಾನೂರು ಹೆಗ್ಗಡತಿ ಮಲೆಯಲ್ಲಿ ಮದುಮಗಳುವಿನಷ್ಟೇ ಮಹತ್ವದ ಕೃತಿ-ಯೆಂಬುದಷ್ಟೇ ಅಲ್ಲ, ಒಂದನ್ನು ಇನ್ನೊಂದು ಜೊತೆಗಿಟ್ಟು ಅಧ್ಯಯನ ಮಾಡುವುದು ಸೂಕ್ತ, ಫಲಪ್ರದ, ಹೆಗ್ಗಡತಿಯಲ್ಲಿ ಬಹುವಾಗಿ ಕೌಟುಂಬಿಕ ವಸ್ತುವೇ ಕೇಂದ್ರಬಿಂದು-ವಾಗಿದ್ದರೆ, ಮಲೆಗಳಲ್ಲಿ ಮದುಮಗಳಲ್ಲಿ ವಿಸ್ತಾರವಾದ, ವಿವಿಧ ಸಾಮಾಜಿಕ ಸ್ತರಗಳ ಅನುಭವಗಳ ಮೂಲಕ ಕೌಟುಂಬಿಕ ಸಮಸ್ಯೆಗಳನ್ನು ವಿಶ್ಲೇಷಿಸುವ ಪ್ರಯತ್ನವಿದೆ. ಮೊದಲನೆಯದರಲ್ಲಿ ವಿಘಟನೆಯ ಚಿತ್ರಣವಿದ್ದರೆ ಎರಡನೆಯದರಲ್ಲಿ ಸಂಘಟನೆಗೆ ಸಹಜವಾಗಿಯೇ ಒತ್ತು ಬಿದ್ದಿದೆ. ವಿಘಟನೆ-ಸಂಘಟನೆಗಳು ಪ್ರತ್ಯೇಕ ಪ್ರತ್ಯೇಕವೆಂದು ಭಾವಿಸದೆ ಒಂದಕ್ಕೊಂದು ತೆಕ್ಕೆ ಹಾಕಿಕೊಂಡಿರುವ ಒಂದು ಇನ್ನೊಂದಕ್ಕೆ ಪ್ರೇರಣೆಯೊದಗಿಸುವ ಪರಿಯನ್ನು ಕುವೆಂಪು ಇಲ್ಲಿ ಸಮಗ್ರೀಕರಿಸಿದ್ದಾರೆನ್ನಬಹುದು. ಅವರಂತೆ ಜೀವನದರ್ಶನ ಹೊಂದಿದವರಿಗೆ ಮಾತ್ರ ಸಾಧ್ಯವಾಗಬಲ್ಲ ಸಾಧನೆಯಿದು. ಅವಿಭಕ್ತ ಕುಟುಂಬವೊಂದು ಆತಂರಿಕ ಮತ್ತು ಬಾಹ್ಯ ಸೆಳೆತಗಳಿಗೆ ಸಿಕ್ಕು ಒಡೆದುಹೋಗುವ ಕ್ರಿಯೆಯಲ್ಲಿ ಅನಿವಾರ್ಯತೆಯೇ ಪ್ರತಿಪಾದಿತವಾಗಿದೆ. ಕುಟುಂಬ ಒಡೆದು ಹೋಗಲು ಕಾರಣೀಭೂತವಾಗಿರುವ ವಿವಿಧ ಸಾಮಾಜಿಕ, ಆರ್ಥಿಕ, ಕೌಟುಂಬಿಕ ಸನ್ನಿವೇಶಗಳು, ವ್ಯಕ್ತಿಗಳು - ಅವರ ಗುಣದೋಷಗಳ ನಿರೂಪಣೆಗೆ ಒತ್ತು ಬೀಳುವ ಹಾಗೆ ಅವರ ಸರಿತಪ್ಪುಗಳ ನೈತಿಕ ವಿಮರ್ಶೆಯ ಜರೂರು ಇಲ್ಲಿಲ್ಲ. ಹೊಸ ವಿಚಾರಗಳೊಂದಿಗೆ ಊರಿಗೆ ಬರುವ ಹೂವಯ್ಯ ರಾಮಯ್ಯರ ಪಾತ್ರಗಳು, ಉಳಿದೆಲ್ಲ

ಪಾತ್ರಗಳು, ಘಟನೆಗಳು ಹಾಗೂ ನಡೆವಳಿಕೆಗಳ ಹಿನ್ನೆಲೆಯಲ್ಲಿ ಪರಸ್ಪರವಾಗಿ ವಿಮರ್ಶೆಗೊಳಗಾಗುವುದನ್ನು ಗಮನಿಸಬಹುದು. ಹೂವಯ್ಯ ಮನಸಾರೆ ಪ್ರೀತಿಸದ ಸೀತೆಯನ್ನು ಬಲವಂತವಾಗಿ 'ಮದುವೆ'ಯಾದ ರಾಮಯ್ಯ ಅವಳನ್ನು ಕೊನೆಗೂ ದಕ್ಕಿಸಿಕೊಳ್ಳಲಾರದೆ ಹೊಗುತ್ತಾನೆ. ಆತ್ಮಹತ್ಯೆ ಮಾಡಿಕೊಳ್ಳುತ್ತಾನೆ. ಹೂವಯ್ಯನ ಆದರ್ಶಗಳೆಲ್ಲಾ ಕೌಟುಂಬಿಕ ವಿಘಟನೆಯ ವಿವಿಧ ಶಕ್ತಿಗಳ ಪ್ರಭಾವದ ಮುಂದೆ ನುಚ್ಚುನೂರಾಗಲೇಬೇಕಾದ ಸ್ಥಿತಿಯನ್ನು ಕಾದಂಬರಿ ಮುಂದೊಡ್ಡುತ್ತದೆ. ಕೊನೆಗೂ ರಾಮಯ್ಯನ ಆತ್ಮಹತ್ಯೆಯ ನಂತರ ಸೀತೆಯನ್ನು ಹೂವಯ್ಯ ಮದುವೆಯಾಗ ಬಹುದಿತ್ತೆನ್ನುವ ಘಟ್ಟದಲ್ಲಿ ಕಾದಂಬರಿ ಮುಕ್ತಾಯವಾಗುವುದನ್ನು ಕೂಡ ವಿಚಾರಮಾಡಬೇಕು. ಹೂವಯ್ಯ ವಿವೇಕಾನಂದರ ಆದರ್ಶ, ಧ್ಯಾನ, ಪ್ರಾರ್ಥನೆ, ಓದುಗಳಲ್ಲಿ ತನ್ಮಯವಾಗುವವ, ಕಣ್ಣೆದುರೆ ಸುಬ್ಬಮ್ಮ-ಸೇರಿಗಾರರ ಸಂಬಂಧ, ತಾಯಿಯ ಸಾವು, ಮೂಢನಂಬಿಕೆಗಳು, ಪ್ರಾಣಿಬಲಿ ಮುಂತಾದವುಗಳಿಂದ ಜರ್ಜರಿತನಾಗಿ ಆತ ಬ್ರಹ್ಮಚಾರಿಯಾಗಿ ಉಳಿಯುತ್ತಾನೆ.



ಕಾದಂಬರಿ ಹೂವಯ್ಯನ ಆದರ್ಶ ಅನುಕರಣೀಯ ಎಂಬಂತೆ ಚಿತ್ರಿಸುತ್ತದೆಯೇ ಎಂಬ ಪ್ರಶ್ನೆಯನ್ನು ಚರ್ಚಿಸಬೇಕು. 'ಕುವೆಂಪು ಅವರಿಗೆ ಶೂದ್ರರು ಆಧುನಿಕರಾಗುವ, ಸನಾತನ ಧರ್ಮ ಪ್ರವರ್ತನೆಯ ಹರಿಕಾರರಾಗುವ ಹಾಗೂ ಧಾರ್ಮಿಕ ಅಧಿಕಾರ ಗಳಿಸುವುದರಲ್ಲಿ ಅವರ ಮೋಕ್ಷದ ಕಲ್ಪನೆ ಇದೆ ಎಂದು ಡಾ.ರಾಜರಾಮ ಹೆಗಡೆ ಭಾವಿಸುತ್ತಾರೆ."[೧] "ಉಳಿದ ಪಾತ್ರಗಳು ಕ್ಷುದ್ರತೆಯಲ್ಲಿ ನಾಶವಾದರೆ ಹೂವಯ್ಯ ಅದನ್ನು ಮೀರುವ ಸಂರಕ್ಷಣಾ ತಂತ್ರವಾಗಿ ಆಂತರಿಕ ಪೂರ್ಣತ್ವವನ್ನು ಹೊಂದಲೆಳೆಸುತ್ತಾನೆ ಎಂಬುದು ಅವರ ವಾದ. ಈ ಕಾದಂಬರಿಯಲ್ಲಿ ಮದುಮಗಳಿಗಿಂತ ಭಿನ್ನವಾಗಿ ಎಲ್ಲ ಪಾತ್ರಗಳ, ಸನ್ನಿವೇಶಗಳ ಒಳಗೂ ಒಂದು ಸಂದಿಗ್ಧತೆ ಇದೆ ಎಂಬುದು ತೀರ್ಮಾನಿಸುತ್ತಾರೆ."[೨]

ಕಾನೂರು ಹೆಗ್ಗಡತಿಯಂತೆ ಮಲೆಯಲ್ಲಿ ಮದುಮಗಳಲ್ಲೂ ಜಾತಿ-ವರ್ಗ-ಕೋಮು ಸಂಬಂಧಗಳು. ಗಂಡು ಹೆಣ್ಣು ಸಂಬಂಧಗಳು ಜಿಜ್ಞಾಸೆಗೊಳಗಾಗಿವೆ. ದಾಂಪತ್ಯೇತರ ಸಮಬಂಧಗಳು, ಮತೀಯ-ಲೈಂಗಿಕ ಶೋಷಣೆ, ಶೋಷಣೆಗೆ ಅನಿವಾರ್ಯವಾದ ಆಮಿಷಗಳು ಎರಡರಲ್ಲೂ ಸಮಾನವಾಗಿವೆ. ಎರಡೂ

---

೧. ಡಾ. ರಾಜರಾಮ ಹೆಗಡೆ, ಕುವೆಂಪು ಕಾದಉುರಿಗಳಲ್ಲಿ ವಸಾಹತುಶಾಹಿ ಅನುಭವದ ಸ್ವರೂಪ, ಪು. ೭೨, ಕುವೆಂಪು ಕಾದಂಬರಿಗಳಲ್ಲಿ ವೈಚಾರಿಕ ನೆಲೆಗಳು, ಪ್ರಸಾರಾಂಗ, ಕುವೆಂಪು ವಿಶ್ವವಿದ್ಯಾನಿಲಯ, ಶಂಕರಘಟ್ಟ, ೧೯೯೮.

೨. ಅದೇ, ಪು. ೭೩.

ಕಾದಂಬರಿಗಳಲ್ಲಿ ಹಿಂದೂ-ಕ್ರಿಶ್ಚಿಯನ್ ಪುರೋಹಿತಶಾಹಿ ತೀವ್ರವಾದ ವಿಮರ್ಶೆಗೆ, ವಿಡಂಬನೆಗೊಳಗಾಗಿದೆ. ಜೊತೆಗೆ ಆರ್ಥಿಕ, ಧಾರ್ಮಿಕ ದಲ್ಲಾಳಿ ವರ್ಗದ ಸೃಷ್ಟಿಯನ್ನು ಒತ್ತಾಯಿಸುವ ಮತ್ತು ಅದರ ಕಾರ್ಯವಿಧಾನವನ್ನು ನಿರ್ಧರಿಸುವ ವ್ಯವಸ್ಥೆಯ ಸ್ವರೂಪವೇ ನಮ್ಮ ಕಣ್ಣಮುಂದೆ ನಿಲ್ಲುತ್ತದೆ.

"ಹೊಸಬಗೆಯ ಬಟ್ಟೆ, ಗಡಿಯಾರ, ಸೈಕಲ್ ಮುಂತಾದ ನಾಗರಿಕ ಜಗತ್ತಿನ ಸಾಮಾನ್ಯ ಸಾಧನಗಳ ಬಗ್ಗೆ ಮೆಚ್ಚುಗೆ ಕೂಡ ಸಾಂಪ್ರದಾಯಿಕ ಸಮಾಜದಲ್ಲಿ ಮೂಡುತ್ತಿರುವುದನ್ನು ಕಾದಂಬರಿ ಗುರುತಿಸುತ್ತದೆ. ಸಾಮಾಜಿಕ ಸ್ಥಿತ್ಯಂತರದೊಂದಿಗೆ ಹೊಸತರ ಕುರಿತಾದ ಆಕರ್ಷಣೆ ಬೆಳೆಯುತ್ತಿರುವುದನ್ನು ಕುವೆಂಪು ಚಿತ್ರಿಸಿರುವ ಬಗ್ಗೆ ದೇವನೂರು, ಆಲನಹಳ್ಳಿ, ತೇಜಸ್ವಿಯಂತಹ ಮುಂದಿನ ತಲೆಮಾರಿನವರಿಗೆ ಸ್ಫೂರ್ತಿ ನೀಡಿದ್ದನ್ನು ಗಮನಿಸಬೇಕು. ಉದಾಹರಣೆಗೆ ಬ್ರಾಹ್ಮಣ ಮಹಿಳೆಯರು ಜುಟ್ಟುಬಿಟ್ಟ ತಮ್ಮ ಗಂಡಂದಿರನ್ನು ಕ್ರಾಪು ಬಿಟ್ಟ ಆಧುನಿಕ ಯುಗದ ದೇವಯ್ಯನ ಹಾಗಿರುತ್ತಿದ್ದರೆ ಎಂದು ಆಶಿಸುವುದು"[೧] ನೋಡಬಹುದಾಗಿದೆ.

ಒಬ್ಬರನ್ನೊಬ್ಬರು ಪ್ರೀತಿಸಿ, ಒಬ್ಬರನ್ನೊಬ್ಬರು ಕಷ್ಟ ಸಂಕಷ್ಟಗಳಿಂದ ಪಾರುಮಾಡುವ ಆ ಮೂಲಕ ತಾವು ಪಾರಾಗುವ ಕ್ರಿಯೆಯನ್ನು ಹೆಗ್ಗಡತಿಗಿಂತ ಮದುಮಗಳು ಹೆಚ್ಚು ಢಾಳಾಗಿ ಖಚಿತವಾದ ರೀತಿಯಲ್ಲಿ ಚಿತ್ರಿಸಿದೆ. ಈ ಕ್ರಿಯೆಯಲ್ಲಿ ಒಳಗೊಳ್ಳುವವರು ಸಮಾನ ದುಃಖಿಗಳು, ಜಾತಿ-ಲಿಂಗ-ವರ್ಗಗಳ ತಾರತಮ್ಯವನ್ನು ಧಿಕ್ಕರಿಸಿ ಪರಿಶುದ್ಧ ಪ್ರೀತಿ, ಸಹಾನುಭೂತಿ ಸಹಕಾರಗಳ ತತ್ತ್ವವನ್ನು ಸಾಕಾರಗೊಳಿಸುವ ಇಲ್ಲಿಯ ಪಾತ್ರಗಳು ಸಾಮೂಹಿಕ ಸಂಕಲ್ಪದ ಆಶಯ ಮತ್ತು ಕ್ರಿಯೆಯನ್ನು ಎತ್ತಿ ಹಿಡಿಯುತ್ತವೆ. ಹುಲಿಕಲ್ಲು ನೆತ್ತಿ ಇಂತಹ ಸಂಕಲ್ಪದ ಆಶ್ರಯಸ್ಥಾನವಾಗುತ್ತದೆ. ಅಲ್ಪತೆಯನ್ನು ಮೀರಿ ನಿಲ್ಲುವ ಅಚಲ ವಿಶ್ವಾಸವನ್ನು ಆತ್ಮಸಾತ್ ಮಾಡಿಕೊಳ್ಳುವ ಪವಿತ್ರ ಸ್ಥಳವೆನಿಸುತ್ತದೆ. ಕನ್ನಡ ಸಾಹಿತ್ಯದಲ್ಲಿ ಈ ಬಗೆಯ ಸಮೂಹ ಸಂಕಲ್ಪ ಮತ್ತು ಕ್ರಿಯೆಗಳ ಇನ್ನೊಂದು ಮಾದರಿಯ ಅಪೂರ್ವ ಮಂಡನೆಯಾಗಿರುವುದು 'ಕರ್ವಾಲೋ'ದಲ್ಲಿ ಹುಲಿಕಲ್ಲು ನೆತ್ತಿಯಂಥದೋ ಒಂದು ಬಂಡೆಯ ತುದಿಯನ್ನೇರಿದ 'ಚಿದಂಬರ ರಹಸ್ಯ'ದ ಪ್ರೇಮಿಗಳು ಊರಿನ ಕ್ಷುದ್ರತೆಯನ್ನು ಮೀರಿ ಹೊಸದೊಂದು ಜೀವನದ ಸಾಧ್ಯತೆಯನ್ನು ಅನಾವರಣ ಮಾಡುತ್ತಾರೆ. ಮದುಮಗಳು ಕಾದಂಬರಿಯ ಪ್ರಭಾವ ಕನ್ನಡದ ಸತ್ತ್ವಶೀಲ ಕಾದಂಬರಿಕಾರರ ಮೇಲಾಗಿರುವುದು ಅದರ ಮಹತ್ವವನ್ನು ಸತ್ವವನ್ನು ಸಾಬೀತುಪಡಿಸುತ್ತದೆ. ಹಾಗೂ ಕನ್ನಡ ಕಾದಂಬರಿ

---

೧. ಕುವೆಂಪು, ಮಲೆಗಳಲ್ಲಿ ಮದುಮಗಳು, ಪು. ೪೭೮, ಉದಯ ರವಿ ಪ್ರಕಾಶನ, ಮೈಸೂರು.

ಪರಂಪರೆಯನ್ನೇ ರೂಪಿಸಿದ ಕುವೆಂಪು ಅವರ ಕಾದಂಬರಿಗಳ ಚಾರಿತ್ರಿಕ ಮಹತ್ವವನ್ನು ಶ್ರುತಪಡಿಸುತ್ತದೆ.

ಇಲ್ಲಿ ವಸಾಹತುಶಾಹಿಯ ಅಂಗವಾಗಿ ಕ್ರಿಶ್ಚಿಯನ್ ಪುರೋಹಿತಶಾಹಿ ನಡೆಸುವ ಕಾರುಬಾರಿನ ವರ್ಣನೆಯ ಸ್ವರೂಪವನ್ನು ಕೂಡ ಚಿಂತನೆಗೊಳಪಡಿಸಲಾಗಿದೆ. ಕುವೆಂಪು ಅವರು ವಸಾಹತುಶಾಹಿಯ ಕ್ರೌರ್ಯವನ್ನು ಮತಾಂತರ ಪ್ರಯತ್ನದ ಹಿಂದಿನ ದುರುದ್ದೇಶವನ್ನು ಗಮನಿಸುತ್ತಾರೆ. ಜೊತೆಗೇ ಈ ವ್ಯಕ್ತಿಗಳು ಆಧುನಿಕತೆಯ ಹರಿಕಾರರಾಗಿ ಸಮಾಜ ಸೇವೆಯ ಸುಧಾರಣೆಯ ಅಸ್ತ್ರಗಳಾಗಿ ಕೂಡ ಕೆಲಸ ಮಾಡಿರುವ ವಾಸ್ತವವನ್ನು ಕುವೆಂಪು ಕಡೆಗಣಿಸಿಲ್ಲ. ಇಂಗ್ಲಿಷ್ ಶಿಕ್ಷಣದ ಬಗೆಗೆ ಕುವೆಂಪು ತಳೆದಿರುವ ಒಟ್ಟು ಧೋರಣೆಗೆ ಅನುಗುಣವಾಗಿಯೇ ಈ ಅಂಶ ಇಲ್ಲಿ ಚರ್ಚಿತವಾಗಿದೆ. ವಸಾಹತುಶಾಹಿ ತನ್ನ ವಸಾಹತುಗಳಲ್ಲಿ ಎಸಗುತ್ತ ಬಂದ ಮತೀಯ ದಬ್ಬಾಳಿಕೆ, ಮತಾಂತರ ಕುರಿತ ನಿರೂಪಣೆಯ ಭಾಗ ಜಗತ್ತಿನಾದ್ಯಂತ ಇದು ಮಾಡುತ್ತ ಬಂದ ಶೋಷನೆಯ ಸ್ವರೂಪವನ್ನು ಲೇಖಕ ಖಚಿತವಾಗಿ ಗ್ರಹಿಸಿದ್ದಾರೆಂಬುದನ್ನು ವಿಶದಪಡಿಸುತ್ತದೆ. ವಿವೇಕಾನಂದ ೧೮೯೩ ಸೆಪ್ಟೆಂಬರ್ ೧೧ರಂದು ಚಿಕಾಗೋ ನಗರದಲ್ಲಿ ಮಾಡಿದ ಭಾರತದ ಆಧ್ಯಾತ್ಮಿಕತೆಯ ಔನ್ನತ್ಯೆಯ ಕುರಿತಾದ ಭಾಷಣದ ಪ್ರಸ್ತಾಪದೊಂದಿಗೆ ಅವನೊಂದಿಗೆ ಸ್ಪರ್ಧಿಸುವ ಪಾದ್ರಿ ಜೀವರತ್ನಯ್ಯನ ಚಟುವಟಿಕೆಗಳ ಬೆಲೆಕಟ್ಟಲಾಗಿದೆ. ಕೊನೆಗೂ ದೇವಯ್ಯ ಹೆಗ್ಗಡೆಯನ್ನು ಮತಾಂತರಿಸಲು ಪಾದ್ರಿ ವಿಫಲನಾಗುವುದು ಈ ವಿವೇಕಾನಂದ ಪ್ರತಿನಿಧಿಸುವ ಭಾರತೀಯ ಆಧ್ಯಾತ್ಮಿಕ ಪರಂಪರೆಯ ಶ್ರೇಷ್ಠತೆಗೊಂದು ವಿಜಯವೆಂಬಂತೆ ಧ್ವನಿಸಲಾಗಿದೆ. ಮುಕುಂದಯ್ಯ ನಂಥ ವಿದ್ಯಾವಂತರು, ಪಾದ್ರಿ ಸುರುಮಾಡುವ ಶಾಲೆಯನ್ನು ತಮ್ಮ ಪರಿಸರದ ಮಕ್ಕಳಿಗೆ ಶಿಕ್ಷಣ ಸಿಗುವುದರಿಂದಾಗಿ ಸ್ವಾಗತಿಸುತ್ತಾರೆ. ಆಧುನಿಕತೆಯ ಪ್ರತೀಕದ ಈ ಶಲೆಯ ಕಟ್ಟಡ ನಿರ್ಮಾಣವಾಗುತ್ತಲೇ ಸಮಾಜಕಂಟಕ ಶಕ್ತಿಗಳ ಕೇಂದ್ರವಾಗುವುದನ್ನು ಕೂಡ ಕಾದಂಬರಿ ನಿರೂಪಿಸುವುದರಿಂದ ಆಧುನಿಕತೆಯ ಇನ್ನೊಂದು ಮುಖವನ್ನು ತೆರೆದಿಟ್ಟಂತಾಗಿದೆ.

ಕುವೆಂಪು ಅವರು ಬಿಡುಗಣ್ಣ ನೋಟದಿಂದ ಜೀವನವನ್ನು ಕಾಣುವ ಅನುಭವಿಸುವ ಧೀರತೆ ಉಳ್ಳವರು. ಆಳವಾದ ಅಧ್ಯಯನದಿಂದ ಪಡೆದ ವಿದ್ವತ್ತು, ಆಳ–ವಿಸ್ತಾರಳನ್ನು ಹೊಂದಿದ ಶ್ರೀಮಂತ ಮನಸ್ಸು ಆರಕ್ಕೇರದ ಮೂರಕ್ಕಿಳಿಯದ ಸಮತೂಕ ಜೀವನ ದೃಷ್ಟಿ ಸಂವೇದನಾಶೀಲತೆಯಿಂದ ಕೂಡಿದ ನೋಟವುಳ್ಳ, ಧೀಶಕ್ತಿಯ ಪ್ರೌಢ ಲೇಖಕರು, ಸಮಾಜದ ಆಗುಹೋಗುಗಳ ಬಗೆಗೆ ಸಮಷ್ಟಿಯ ಒಳ

ಗುಟ್ಟುಗಳ ಬಗೆಗೆ ಪ್ರಾಯಶಃ ಯಾವ ಲೇಖಕನಿಗೂ ಇರದಷ್ಟು ತಿಳಿವು ಅವರಿಗಿತ್ತು. ನಾಡಿನ ಗಾಢ ಅನುಭವವನ್ನು ತಮ್ಮಲ್ಲಿ ಗರ್ಭೀಕರಿಸಿಕೊಂಡು ಬರೆಯ ಹೊರಟ ಕುವೆಂಪು ತೆರೆದ ಕಣ್ಣಿನಿಂದ ಸುತ್ತಣವೆಲ್ಲವನ್ನು ಹೀರಿ ಬೆಳೆದವರು. ಮಲೆನಾಡಿನ ಭಗ್ನ ಬದುಕಿನ ನೆಲೆಯಿಂದ ಹೊರಬಿದ್ದ ಅವರಿಗೆ ತನ್ನ ಜನರ ಬದುಕಿಗೆ ಬಡಿದಿರುವ ಮೂಢ ನಂಬಿಕೆಗಳ ರಾಹುವಿನ ಬಗೆಗೆ ಅಸಾಧ್ಯ ಸಿಟ್ಟು, ಮುಗ್ಧ ಹಳ್ಳಿಗರ ಆಸೆಗಂಗಳಿಗೆ ಆಕಾಶ ತೋರಿಸಿ ಮೋಸಪಡಿಸುವ ಚಿಲ್ಲರೆ ಪುರೋಹಿತರ ಪೌರೋಹಿತ್ಯದ ಬಗೆಗೆ ಹೇಸಿಗೆ. ವೈಚಾರಿಕತೆಯನ್ನು ಬದುಕಿನಲ್ಲಿ ರೂಢಿಸಿಕೊಂಡು, ಸ್ವಂತ, ನಿರ್ದಿಷ್ಟ ಹಾಗೂ ಉತ್ಕೃಷ್ಟ ನಿರ್ಣಯಗಳ ನಿಲುವನ್ನು ಕೈಗೊಂಡು ಬರೆದ ಕುವೆಂಪು ಎಲ್ಲ ಹೀನಾಯ ಬದುಕಿನಿಂದ ದೂರ ನಿಂತವರು. ವಸ್ತು ಸ್ಥಿತಿಯ ಬರಹದಲ್ಲಿ ಮಾನವೀಯತೆಯ, ನೈತಿಕತೆಯ ಲೇಖಕರು, ಕೀರ್ತಿಯ ಬಗೆಗೆ, ಅಧಿಕಾರದ ಅಹಮಿಕೆಯ ಬಗೆಗೆ, ನಿರಂಕುಶಾಧಿಕಾರ ಪ್ರವೃತ್ತಿಯ ಎಡೆಗೆ ಇವರದು ದಿವ್ಯ ನಿರ್ಲಕ್ಷ್ಯ. ಮನುಷ್ಯ ಬದುಕು ಮರೆಮಾಚಿದ ಬದುಕಾಗಬಾರದು, ಬಿಚ್ಚು ಬದುಕಾಗಬೇಕು, ಯಾರೇ ಆಗಿರಲಿ ಪ್ರಜ್ಞಾಪೂರ್ವಕವಾಗಿಯೇ ತನ್ನ ಬದುಕನ್ನು ಬೆಳೆಸಬೇಕೆನ್ನುವ ಆಸೆಯನ್ನು ಹೊತ್ತ ಕುವೆಂಪು ಅವರದು ಬದುಕಿನ ಸುತ್ತ ಕವಿದುಕೊಂಡಿರುವ ಸಮಾಧೀ ನಡೆಯನ್ನು ಉರುಳಿಸಿದ ನಿಚ್ಚಳ ಜೀವನ ದರ್ಶನ.

ಕುವೆಂಪು ಮೌಲ್ಯಗಳ ಆವರಣದಲ್ಲಿ ಬದುಕಿದವರು ಬದುಕು ಅವರಿಗೆ ಅತ್ಯಂತ ಮಹತ್ವಪೂರ್ಣವಾದದ್ದು. ಬದುಕಿನ ಸ್ವಚ್ಛಂದತೆಯನ್ನು ಬಿಡಿ ಬಿಡಿಯಾಗಿ ತೆಗೆದುಕೊಂಡುವರಲ್ಲ. ಸಮಾನವಾದುದು, ಆತ್ಮೀಯವಾದುದು ಏನೇನಿದೆಯೋ ಅದೆಲ್ಲವನ್ನು ಮುಕ್ತ ಮನಸ್ಸಿನಿಂದ ಸ್ವೀಕರಿಸಿ ಬಾಳಿನ ಸಮಸ್ತ ಸಂವೇದನೆಗಳಿಗೂ ತಮ್ಮನ್ನು ಒಡ್ಡಿಕೊಂಡಿದ್ದಾರೆ. ನಿಸರ್ಗ ಅವರಿಗೆ ಹುಚ್ಚು ತರಿಸುತ್ತದೆ. ಅಸಮಾನತೆ ರೊಚ್ಚಿಗೇಳಿಸುತ್ತದೆ. ಶೊಷಣೆ ಅಸಹ್ಯವನ್ನು ಬರಿಸುತ್ತದೆ. ನಿಸರ್ಗ, ಅಧ್ಯಾತ್ಮಗಳನ್ನು ಮನಃಪೂರ್ವಕವಾಗಿ ಒಪ್ಪಿ ಪ್ರೀತಿಸುತ್ತಿದ್ದ ಅವರು ಸಾಮಾಜಿಕ ಸಮಸ್ಯೆಗಳತ್ತ ಆರ್ಥಿಕ ಅಸಮಾನತೆಗಳು, ಶೋಷಣೆ, ವರ್ಗ ಮತ್ತು ವರ್ಣ ಸಂಘರ್ಷಗಳ ವಿರುದ್ಧ ರೊಚ್ಚಿಗೆದ್ದರು. ಇಡೀ ವ್ಯವಸ್ಥೆಯನ್ನು ಸಂಪೂರ್ಣವಾಗಿ ತೊಡೆದುಹಾಕಬೇಕು. ಹಾಗಿಲ್ಲದಿದ್ದರೆ ವ್ಯವಸ್ಥೆಯನ್ನು ಆರೋಗ್ಯಕರ ದಿಸೆಯತ್ತಲಾದರೂ ಪರಿವರ್ತಿಸ-ಬೇಕೆಂಬುದು ಅವರ ಆಶಯವಾಗಿತ್ತು.

ಯಾವುದೇ ಸಂಕುಚಿತ ಭಾವನೆಗಳನ್ನು ಬಲವಾಗಿ ವಿರೋಧಿಸುತ್ತಿದ್ದರು. "ಸರ್ವರಿಗೆ ಸಮಪಾಲು ಸರ್ವರಿಗೆ ಸಮಬಾಳು" ಎನ್ನುವಲ್ಲಿ ಅಸಮಾನತೆಯ

ಅಗ್ನಿಯಲ್ಲಿ ಬೆಂದ ಬಡವರು ಸಿಡಿದೆದ್ದು ಹೋರಾಡಲು ಅಣಿಯಾಗುತ್ತಾರೆ ಎನ್ನುವ ಕುವೆಂಪು ಅವರಿಗೆ ವರ್ಗಭೇದ ಸ್ಥಿತಿಯ ಅರಿವಿದ್ದು ಭಾರತದಲ್ಲಿ ವರ್ಗಹೋರಾಟದ ಆತಂಕವಿದೆ ಎಂಬ ವ್ಯಥೆಯನ್ನು ಪ್ರಕಟಿಸುತ್ತಾರೆ. ಅಸಮಾನತೆ ಅಳಿದು ಸರ್ವರೂ ಒಂದೆನ್ನುವ ಸಮ ಸಮಾಜ ನಿರ್ಮಾಣದ ಬಗ್ಗೆ ಅವರಿಗೆ ಕಳಕಳಿಯಿದೆ. ಶೋಷಣೆಯ ಸಾಧನ–ವಾಗಿರುವ ದೇವರನ್ನು, ಧರ್ಮವನ್ನು ವಿರೋಧಿಸಿ ಆಧ್ಯಾತ್ಮದಲ್ಲಿ ತಮ್ಮ ಅತೀವ ಶ್ರದ್ಧೆಯನ್ನು ಇಟ್ಟುಕೊಂಡಿದ್ದರು.

# ಅಧ್ಯಾಯ – ೬

# ಕುವೆಂಪು ಕಾದಂಬರಿಗಳಲ್ಲಿ ಪ್ರಾದೇಶಿಕತೆ

ನೈಸರ್ಗಿಕ ಕಾರಣವೊಂದರಿಂದ ಬಹುಕಾಲ ಜನಸಂಪರ್ಕ ದುರ್ಬಲವಾದ ಪ್ರದೇಶ ತನ್ನದೇ ಪರಿಸರ, ಜನಜೀವನ, ಭಾಷೆ, ನಂಬಿಕೆಗಳನ್ನು ರೂಢಿಸಿಕೊಂಡು ಇತರ ಭಾಗಗಳಿಗಿಂತ ಬೇರೆಯಾಗಿರುವುದು ಸಹಜ. 'ಕಾಡುಮೇಡು ಬೆಟ್ಟಗುಡ್ಡಗಳ ದೆಸೆಯಿಂದ ಭೌಗೋಳಿಕ ಎಲ್ಲೆಕಟ್ಟನ್ನು ರಚಿಸಿಕೊಂಡು ಇಂಥ ಪ್ರತ್ಯೇಕತೆಯನ್ನು ಸುಮಾರು ಕಾಲ ಕಾಪಾಡಿಕೊಂಡಿದ್ದ ಮಲೆನಾಡು ಮತ್ತು ಅಲ್ಲಿಯ ಬದುಕು ನಮ್ಮ ನಾಡಿನ ಇತರೆ ಭಾಗಗಳಿಗಿಂತ ಗಮನಾರ್ಹವಾಗಿ ಭಿನ್ನವೆನ್ನಿಸಿತ್ತು. ಈ ಭಿನ್ನತೆಯ ವಿವಿಧಾಂಶಗಳನ್ನು ನಿರ್ದೇಶಿಸುವುದಕ್ಕೆ 'ಪ್ರಾದೇಶಿಕತೆ' ಎಂಬ ಪದವನ್ನು ಬಳಸುತ್ತೇವೆ."[೧] ಎಂಬ ಅಂಶ ಸಹಜವಾದದ್ದು. ಜನರ ನಡೆನುಡಿಗಳಲ್ಲಿ, ಜೀವನದ ರೀತಿಯಲ್ಲಿ ಅವರ ಆಚಾರ ವಿಚಾರಗಳಲ್ಲಿ ಅವರನ್ನು ಆವರಿಸಿರುವ ಪರ್ವತಾರಣ್ಯ ಮತ್ತು ಅದು ಆ ಜನರನ್ನು ತನಗೆ ಹೊಂದಿಸಿಕೊಳ್ಳುವ, ಪಳಗಿಸುವ, ಮಾರ್ಪಡಿಸುವ ನಾನಾ ಪ್ರಭಾವಗಳಲ್ಲಿ ಪ್ರಾದೇಶಿಕತೆಯನ್ನು ಗುರುತಿಸಬಹುದು. ಪ್ರಾದೇಶಿಕತೆ ಆ ನೆಲದ ಆತ್ಮ'[೨] ಶಿವರಾಮ ಕಾಡನ ಕುಪ್ಪೆಯವರು ಪ್ರಾದೇಶಿಕತೆಯನ್ನು ಕುರಿತು ಹೀಗೆನ್ನುತ್ತಾರೆ. "ಒಂದು ಪ್ರದೇಶದ ಪ್ರಾದೇಶಿಕತೆ ಎಂಬುದು ಅದರ ಭೌಗೋಳಿಕ, ಭಾಷಿಕ, ಸಾಂಸ್ಕೃತಿಕ ಮತ್ತು ಸಾಮಾಜಿಕ ಅಂಶಗಳಲ್ಲಿ ವ್ಯಕ್ತವಾಗುತ್ತದೆ. ಈ ಪ್ರಾದೇಶಿಕ ವಿಭಿನ್ನಾಂಶಗಳು ಮತ್ತೊಂದು ಪ್ರದೇಶ ಇಂಥವೇ ಅಂಶಗಳಿಗಿಂತ ವಿಶಿಷ್ಟವೂ ವಿನೂತನವೂ ಆಗಿದ್ದಾಗ ಮಾತ್ರ ಅವು ಗಮನಾರ್ಹವಾಗಿರುತ್ತವೆ. ಈ ಪ್ರಾದೇಶಿಕ ಅಂಶಗಳು ತನ್ನ ಪರಿಸರ ಪ್ರಪಂಚವನ್ನು ಮತ್ತೊಂದು ಪರಿಸರ ಪ್ರಪಂಚದಿಂದ ಪ್ರತ್ಯೇಕಗೊಳಿಸುತ್ತವೆ ಎಂದು ಮೇಲುನೋಟಕ್ಕೆ ಅನಿಸಿದರೂ ಎಲ್ಲವನ್ನೂ ಬಂದಿಸಿಡುವ ಮಾನವೀಯ ಮೌಲ್ಯಗಳು ಎಲ್ಲೆಡೆ ಕೆಲಸ ಮಾಡುತ್ತಿರುತ್ತವೆ"[೩] ಎನ್ನುವ ಅಂಶ ಗಮನಾರ್ಹವಾದದ್ದು.

---

೧. ಪ್ರೊ.ಕೆ.ಎಸ್.ನಿಸಾರ್ ಅಹಮದ್ ಕುವೆಂಪು ಕಾದಂಬರಿಗಳಲ್ಲಿ ಪ್ರಾದೇಶಿಕತೆ, ಪು. ೫೮೧, ಅನಿಕೇತನ(ಸಂ) ಡಾ. ಸಾ.ಶಿ.ಮರುಳಯ್ಯ ಸ್ವಪ್ನ ಬುಕ್ ಹೌಸ್, ಬೆಂಗಳೂರ್ರು, ೨೦೦೫.

೨. ಅದೇ, ಪು. ೫೮೧

೩. ಶಿವರಾಮ ಕಾಡನ ಕುಪ್ಪೆ, ಕುವೆಂಪು ಕಾದಂಬರಿಯಲ್ಲ ಪ್ರಾದೇಶಿಕತೆ, ಪು. ೨೧೭, ಸಹ್ಯಾದ್ರಿಯ ಸೂರ್ಯ(ಸಂ) ಡಾ.ಚಕ್ಕೆರೆ ಶಿವಶಂಕರ್, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೪.

ಪ್ರಾದೇಶಿಕತೆ ಪ್ರದೇಶ ಸೂಚಿಸಿಯಾದರೂ ಕೇವಲ ಸ್ಥಳ ಬದ್ಧವಾಗಿರದೆ ಕಾಲವನ್ನು ಒಳಗೊಳ್ಳುವ ಕಲ್ಪನೆ ಎಂಬುದು ಮುಖ್ಯ. 'ಪ್ರಾದೇಶಿಕತೆ ಒಂದು ವಿಶೇಷ ಪರಿಸರವುಳ್ಳ ನೆಲದ ಆತ್ಮವಂತೆ"[೧] ಪರಿಸರ ನಮ್ಮ ಸುತ್ತಲಿನ ಸಮೂಹ ಸ್ಥಿತಿ ಎನಿಸಿದೆ. ವಸ್ತು, ವಿಷಯ, ಭಾವಗಳ ವಿಭಿನ್ನ ಪರಿಸರಗಳು ವಸ್ತು ಪರಿಸರ, ಸಾಂಸ್ಕೃತಿಕ ಪರಿಸರ ಇದ್ದರೂ ಪ್ರಚಲಿತದಲ್ಲಿ ನೆಲ, ಜಲ, ವಾಯು, ಕಾಡು, ನದಿ, ಪ್ರಾಣಿ, ಪಕ್ಷಿಗಳ ಸಾವಯವ ಬದುಕಿನ ಒಪ್ಪಂದಕ್ಕೆ ಪರಿಸರ ಎಂದು ಬಳಸಲಾಗುತ್ತದೆ."[೨]

ಪ್ರಾದೇಶಿಕತೆ ಎಂಬುದು ಕಾದಂಬರಿಯಲ್ಲಿ ಕಲೆಯಾಗಬೇಕು. ಅದರ ವಿವರಗಳು ಬದುಕಿನ ವಿವರಗಳ ಜೊತೆ ಅವಿನಾಭಾವ ಸಂಬಂಧಗಳಿಸಿಕೊಂಡು ಮಾನವೀಯ ಸಂಬಂಧಗಳಿಗೆ ಪ್ರತಿಮೆಗಳಾಗಿಯೋ ಪ್ರತೀಕಗಳಾಗಿಯೋ ಬಂದಿರಬೇಕು. ಒಂದು ಪರಿಸರ ಪ್ರಪಂಚದ ರೀತಿ ರಿವಾಜುಗಳನ್ನು ನಾವು ಓದುತ್ತಿದ್ದೇವೆ ಎನ್ನುವುದಕ್ಕಿಂತ ಒಂದು ಬದುಕನ್ನು ಅದರ ಎಲ್ಲ ಸೂಕ್ಷ್ಮಾತಿಸೂಕ್ಷ್ಮ ಸಂಬಂಧಗಳ ಜೊತೆ ಸಂವೇದಿಸುತ್ತಾ ಅನುಭವಿಸುತ್ತಿದ್ದೇವೆ ಎಂಬ ಅನುಭವವಾಗಬೇಕು. ಇಂಥ ಅನುಭವ ಒಬ್ಬ ಶ್ರೇಷ್ಠ ಕಾದಂಬರಿಕಾರನ ಕಾದಂಬರಿಯಲ್ಲಿ ಆಗುತ್ತದೆ. ಪ್ರಾದೇಶಿಕತೆ-ಯೆಂಬುದು ತನ್ನ ಪ್ರದೇಶದ, ಜನಾಂಗದ ಬದುಕನ್ನು ಬಿಡಿಸಲಾರದಂತಹ ವಿಶಿಷ್ಟವ್ಯಕ್ತಿತ್ವ ಪಡೆದುಕೊಳ್ಳಲು ಅನುವು ಮಾಡಿಕೊಡುತ್ತದೆ.

ಒಂದು ಕೃತಿಯ ಸಂವಹನದ ದೃಷ್ಟಿಯಿಂದ ಪ್ರಾದೇಶಿಕತೆಯನ್ನು ಗಮನಿಸಬೇಕಾದ ಅವಶ್ಯಕತೆಯಿದೆ.

ಕುವೆಂಪು ಅವರ ಕಾದಂಬರಿಗಳು ಕರ್ನಾಟಕದ ಮಲೆನಾಡಿನ ಎಂಬತ್ತು-ನೂರುವರ್ಷಗಳ ಹಿಂದಿನ ಬದುಕನ್ನು ಚಿತ್ರಿಸುತ್ತವೆ. ಈ ಚಿತ್ರಣ ಪ್ರಾದೇಶಿಕ ಅಂಶಗಳ ದಟ್ಟ ಅನುಭವದೊಡನೆ ನಡೆದಿರುವುದರಿಂದ ಇವು ಕೇವಲ ಸಾಮಾಜಿಕ ಕಾದಂಬರಿಗಳಾಗಿ ಮಾತ್ರ ಉಳಿಯವುದಿಲ್ಲ. ಈ ಕಾದಂಬರಿಗಳ ಸತ್ತ್ವ ಕಾಲ್ಪನಿಕವಲ್ಲ. ಭಾಷೆ ಮತ್ತು ರೀತಿ ರಿವಾಜುಗಳು ಕಾಲ್ಪನಿಕವಲ್ಲ. ಇದಿರಿಂದಾಗಿ ಈ ಕಾದಂಬರಿಗಳು ಕರ್ನಾಟಕ ಸಾಂಸ್ಕೃತಿಕ ಮತ್ತು ಸಾಮಾಜಿಕ ಜೀವನದ ಬಗ್ಗೆ ಕಲಾತ್ಮಕ ವ್ಯಾಖ್ಯೆ ಮಾಡುತ್ತಿವೆಯೆನಿಸುತ್ತದೆ. ಕಳೆದುಹೋದ ಅಥವಾ ಸಂಕ್ರಮಣಶೀಲ ಮಲೆನಾಡಿನ ಬಗ್ಗೆ ಈ ಕೃತಿಗಳು ಮಾಡಿರುವ ಅನುಭವ ದಾಖಲೆಯಿಂದಾಗಿ ಸಾಮಾಜಿಕ ಐತಿಹಾಸಿಕ

---

೧. ಪ್ರೊ. ಕೆ.ಎಸ್.ನಸಾರ್ ಅಹಮದ್ ಕುವೆಂಪು ಕಾದಂಬರಿಗಳಲ್ಲಿ ಪ್ರಾದೇಶಿಕತೆ, ಪು. ೫೮೨, ಬೆಂಗಳೂರು,೨೦೦೫.

೨. ಡಾ.ಮರಿಪಾದಪ್ಪ ಮರಿಗುದ್ದಿ, ಕುವೆಂಪು ಕಾದಂಬರಿಗಳಲ್ಲಿ ಪರಿಸರ, ಪು. ೨೮೬, ಕುವೆಂಪು ಕಾದಂಬರಿಗಳು, ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೪.

ಮಹತ್ವವನ್ನು ಪಡೆದುಕೊಳ್ಳುತ್ತವೆ. ಮಲೆನಾಡಿನ ಬದುಕಿನ ಸಮಗ್ರವಾದ ಚಿತ್ರ ಇಲ್ಲಿ ದೊರೆಯುತ್ತದೆ. ಆ ಬದುಕು ನಡೆಸುತ್ತಿದ್ದ ಗೌಡಿಕೆ ದರ್ಬಾರುಗಳಲ್ಲಿ ಹುದುಗಿ ವ್ಯಕ್ತಿತ್ವವನ್ನು ಕಾಣಲಾಗದಂಥ ಹುಡುಕಲಾರದಂಥ ದಲಿತರ ಚಿತ್ರ ಇಲ್ಲಿ ವ್ಯಾಪಕವಾಗಿ ದೊರೆಯುತ್ತದೆ. ಊಳಿಗಮಾನ್ಯ ವ್ಯವಸ್ಥೆಯ ಅನಿವಾರ್ಯ ಅಂಗವಾಗಿ ಹೋಗಿದ್ದ ಹೆಸರರಿಯದ ಹೆಸರಿಲ್ಲದ ನೂರಾರು ಅಮುಖ್ಯ ಪಾತ್ರಗಳಿಂದಾಗಿಯೇ ಕಾದಂಬರಿ-ಗಳನ್ನು ಸುಂದರಗೊಳಿಸುವ ಕಲೆಗಾರಿಕೆ ಕುವೆಂಪು ಅವರದು. ಈ ಪಾತ್ರಗಳೆಲ್ಲವೂ ಮಲೆನಾಡಿನ ಮರಗಿಡ ಕಾಡು ಮಳೆಗಳಂತೆಯೇ ಅಲ್ಲಿಂದ ಬೇರ್ಪಡಿಸಿ ನೋಡ-ಲಾರದಂತಹ ಅಸ್ತಿತ್ವವನ್ನು ಅಲ್ಲಿನ ಪರಿಸರದೊಂದಿಗೆ ಪಡೆದುಕೊಂಡಿವೆ. ಈ ಪರಿಸರದ ವಿಶಿಷ್ಟ ಪ್ರತಿಮೆಗಳಾಗಿ ಬೈರ, ಜಾಕಿ, ಮಾರ್ಕನ, ಸೋಮ, ನಿಂಗ, ಪುಟ್ಟಣ್ಣ, ತಿಮ್ಮ, ಗುತ್ತಿ, ತಿಮ್ಮಿ, ನಾಯಿ- ಐತ, ಪೀಂಚಲು ನಿಲ್ಲುವುದರಿಂದ ಪ್ರಾದೇಶಿಕತೆ ಅರ್ಥಪಡೆದುಕೊಳ್ಳುತ್ತದೆ.

ಆಧುನಿಕ ಕನ್ನಡದ ನವೋದಯ ಕಾಲದ ಸಾಹಿತ್ಯದಲ್ಲಿ ಮಾನವನ ಬದುಕುಭಾವನೆಗಳ ಜೊತೆಗೆ ಸುತ್ತಲಿನ ಪರಿಸರವು ಗಾಢಸಂಬಂಧ ಪಡೆದುಕೊಂಡ ಚಿತ್ರಗಳು ಕಾಣಿಸಿಕೊಂಡವು. ಒಟ್ಟು ಪರಿಸರದ ನಡುವೆ, ಮನುಷ್ಯನ ಬದುಕು ಸಾಗುವುದನ್ನು ಅವುಗಳ ನಡುವಿನ ಸಂಘರ್ಷ ಸಾಮರಸ್ಯಗಳನ್ನು ಸಾಹಿತ್ಯದಲ್ಲಿ ಪ್ರಧಾನವಾಗಿ ಚಿತ್ರಿಸಿದ ವಿರಳರಲ್ಲಿ ಕುವೆಂಪು ಎದ್ದುಕಾಣುತ್ತಾರೆ.

'ಮಲೆಗಳಲ್ಲಿ ಮದುಮಗಳು' ಕೃತಿಯ ಆರಂಭದಲ್ಲಿ 'ಓದುಗರಿಗೆ' ಎಂಬ ಚಿಕ್ಕ ಭಾಗದಲ್ಲಿ ತುಂಬ ಅರ್ಥಪೂರ್ಣವಾಗಿ ಹೇಳಿರುವುದಿಂತು:

> "ಇಲ್ಲಿ ಯಾರು ಮುಖ್ಯರಲ್ಲ;
> ಯಾರೂ ಅಮುಖ್ಯರಲ್ಲ;
> ಯಾವುವು ಯಃಕಶ್ಚಿತವಲ್ಲ"[೧]

ಇದು ಒಂದು ಬದುಕಿನ ಪ್ರವಾಹವನ್ನು ಅದರ ಸುತ್ತಲಿನ ಪ್ರಕೃತಿ ಪರಿಸರದ ಆಗುಹೋಗುಗಳನ್ನು ಇಡೀಯಾಗಿ ಗಮನಿಸಿ ಹೇಳಿದಂತಿದೆ. 'ಯಾರೂ' 'ಯಾವುದೂ', ಇಲ್ಲಿ ಒಂದೊಂದಕ್ಕೂ ಅನ್ವಯವಾಗುತ್ತವೆ. ಸಾವಿರಾರು ವರ್ಷಗಳಿಂದ ಪರಿಸರದ ತೊಟ್ಟಿಲಲ್ಲಿ ಮನುಕುಲದ ಸಂಸ್ಕೃತಿ ಅರಳಿದೆ. ಆಕಾರಗೊಂಡಿದೆ. ಸುತ್ತಲಿನ ಗಾಳಿ, ನೀರು, ನೆಲ, ಬೆಟ್ಟ, ಗಿಡ, ಮರ, ಪಕ್ಷಿ, ಪ್ರಾಣಿ, ಪೈರು ಗದ್ದೆ ಇವುಗಳ

೧. ಮಲೆಗಳಲ್ಲಿ ಮದುಮಗಳು, ಮುಖಪುಟ ಉದಯರವಿ ಪ್ರಕಾಶನ, ಮೈಸೂರು, ೧೫ನೇ ಮುದ್ರಣ, ೨೦೧೦.

ಒಡನಾಟದಲ್ಲಿ ಮನುಷ್ಯನ ಭಾವಕೋಶ ಮತ್ತು ಬುದ್ಧಿಕೋಶಗಳು ಬಲಗೊಂಡಿವೆ. ಆದರೆ ಇದರ ಪರಿವೆಯೂ ಇಲ್ಲದೆ, ಬೇಕುಬೇಡಗಳಿಗೆ ಸೊಪ್ಪು ಹಾಕದೆ ಲಾಭ ಹಾನಿಗಳ ಲೆಕ್ಕವಿಲ್ಲದೆ, ಪರಿಸರವು ಕಾಲ ಕಾಲದಿಂದಲೂ ಉಳಿದುಬಂದಿದೆ. ಕುವೆಂಪು ಕಾದಂಬರಿಗಳ ಹಿನ್ನೆಲೆ ಮುನ್ನೆಲೆಯಲ್ಲಿ ಅವಕಾಶ ಅನುಕೂಲ ಒದಗಿದಾಗಲೆಲ್ಲ ನುಗ್ಗುವ ಮಲೆಯುವ ಹುಳುವಿನಂತೆ ಅದು ತುಂಬಿಕೊಂಡಿದೆ. ಇಲ್ಲಿಯ ಮಲೆನಾಡಿಗರಿಗೆ ಒಂದೊಂದು ವ್ಯಕ್ತಿತ್ವವಿರುವಂತೆ ಮಲೆ, ನದಿ, ಕಾನನ, ಬೆಟ್ಟ, ಹೊಂಡ, ಹಳ್ಳ, ಗಿಡ, ಮರಗಳಿಗೂ ವ್ಯಕ್ತಿತ್ವವಿದೆ. "ಕನ್ನಡದಲ್ಲಿ ಬಲು ಎತ್ತರದ ಕಾದಂಬರಿಗಳೆನ್ನಿಸಿ, ತಮ್ಮ ಸಾರ್ವಭೌಮತೆಯನ್ನು ಹಲವು ವರ್ಷಗಳಿಂದ ಉಳಿಸಿಕೊಂಡಿರುವ 'ಕಾನೂರುಹೆಗ್ಗಡತಿ' ಮತ್ತು 'ಮಲೆಗಳಲ್ಲಿ ಮದುಮಗಳು' ಗಳ ಯಾವ ಅಂಶವನ್ನೇ ಕುರಿತು ಮಾತಾಡಿದರೂ ಗ್ರಾಮೀಣ ಜೀವನವೊಂದರ ಅಖಂಡತ್ವ ಹಾಗೂ ಬೃಹತ್ತುಗಳು ತಮ್ಮ ಪರಿಮೋನ್ನತಿಯಲ್ಲಿ ಒಂದೆಡೆ ಕೂಡಿಕೊಂಡಿರುವ ಅಪೂರ್ವತೆಯನ್ನು ಸದಾ ನೆನಪಿನಲ್ಲಿ ಉಳಿಸಿಕೊಳ್ಳಬೇಕಾಗುತ್ತದೆ. ಆದ್ದರಿಂದ ಅವುಗಳನ್ನು ವಿವೇಚಿಸುವಾಗ ಸಮಗ್ರತೆಯ ದೃಷ್ಟಿಕೋನವನ್ನು ಹೊಂದಿರಬೇಕಾಗುತ್ತದೆ."[೧]

ಕುವೆಂಪು ಅವರು ತಮ್ಮ ಕಾದಂಬರಿಗಳಲ್ಲಿ ಭಾಷೆಯ ಮೂಲಕ ತರಲೆತ್ನಿಸಿರುವ ಪ್ರಾದೇಶಿಕತೆಯನ್ನು ನೋಡಬಹುದು. ಕುವೆಂಪು ಅವರು ತಮ್ಮ ಕಾದಂಬರಿಗಳಲ್ಲಿ ಪ್ರಮುಖವಾಗಿ ಎರಡು ಬಗೆಯ ಭಾಷೆಯನ್ನು ಬಳಸಿದ್ದಾರೆ. ಒಂದು ಸುಸಂಸ್ಕೃತ ಭಾಷೆ, ಇದು ಪ್ರಮುಖವಾಗಿ ನಿರೂಪಕನ ಭಾಷೆ. ಕಾದಂಬರಿಕಾರನ ವ್ಯಾಖ್ಯಾನ ವರ್ಣನೆ ಇಲ್ಲಿ ಇರುವುದರಿಂದ ಸಹಜವಾಗಿ ಅವನ ಭಾಷೆ ಸುಸಂಸ್ಕೃತವಾಗಿರುತ್ತದೆ. ಎರಡು ಕಾದಂಬರಿಯಲ್ಲಿ ಬರುವ ಶೂದ್ರಾತಿಶೂದ್ರ ದಲಿತರ ಭಾಷೆ.

ಭಾರತೀಯ ಸಂದರ್ಭದಲ್ಲಿ ಜಾತಿ ವರ್ಗದ ಪ್ರಭಾವ ಭಾಷೆಯ ಮೇಲೂ ಆಗುತ್ತದೆಯೆಂಬುದನ್ನು ಕುವೆಂಪು ಅವರು ಗಮನಿಸಿದ್ದಾರೆ. ಒಂದೇ ಭೌಗೋಳಿಕ ಸನ್ನಿವೇಶದಲ್ಲಿ ವಾಸಮಾಡುವ ವಿವಿಧ ಜಾತಿಯ ಜನ ತಮ್ಮ ಪ್ರಜ್ಞೆಯ ಮತ್ತು ವರ್ಗದ ಆಧಾರದ ಮೇಲೆ ಭಿನ್ನವಾದ ಗ್ರಾಮ್ಯತೆಯನ್ನು ರೂಢಿಸಿಕೊಂಡಿರುತ್ತಾ-ರೆಂಬುದನ್ನು ಕುವೆಂಪು ಗುರುತಿಸುತ್ತಾರೆ. ಗುತ್ತಿ-ತಿಮ್ಮಿಯರ ಈ ಸಂಭಾಷಣೆಯನ್ನು ಗಮನಿಸಬಹುದು.

---

೧. ಪ್ರೊ. ಕೆ.ಎಸ್.ನಿಸಾರ್ ಅಹಮದ್, ಕುವೆಂಪು ಕಾದಂಬರಿಗಳಲ್ಲಿ ಪ್ರಾದೇಶಿಕತೆ, ಪು. ೫೮೨.

"ಇಲ್ಲಿ ನೋಡ್ದೇನು, ಏನಿದೆ ಅಂತಾ?" ಎಂದು ತನ್ನ ಎಡದ ತೋಳನ್ನು ಚಾಚಿ ಅದಕ್ಕೆ ಕಟ್ಟಿದ್ದ ತಾಯಿತ ತೋರಿಸುತ್ತಾ ಹಂಗಿಸಿದನು: ಕಣ್ಣ ಪಂಡಿತರು ಕೊಟ್ಟಿದ್ದು ಕಣೇ, ಅಂತ್ರ! ಎಂಥಾ ಒಲ್ಲೇ ಅನ್ನೋ ಹೆಣ್ಣನಾದ್ರೂ ಒಲಿಯೋ ಹಾಂಗೆ ಮಾಡ್ತದಂತೆ. ಅಲ್ಲದಿದ್ದರೆ ನನ್ನ ಸಂಗಡ ನೀ ಇಷ್ಟು ಸುಲಭಕ್ಕೆ ಓಡಿ ಬರ್ತ್ತಿದ್ಯಾ? ಚುಟಕಿ ಹಾಕಿ ಕರದ್ರೆ ನಾಯಿ ಬರಹಂಗೆ?"

"ನಿಂಗೊಬ್ಬನಿಗೆ ಅಂತಾ ಮಾಡಿಯೇನೂ? ಅವನಿಗೂ ಕೊಟ್ಟವರೆ ಅವರು?" "ಯಾರಿಗೇ!" ಬೆಚ್ಚಿಕೇಳಿದನು, ಸ್ವಲ್ಪ ಅಪ್ರತಿಭನಾದಂತೆ "ಯಾರಿಗೆ? ಅವನಿಗೇ! ಆ ಬಚ್ಚಗೆ" ಗೆದ್ದ ದನಿಯಿಂದ ಹೇಳಿದಳು.

ಸೋತವನಿಗೆಂಬಂತೆ

ಅವನಿಗೂ ಹಿಂಗೇ ಅಂತ್ರಾ ಕೊಟ್ಟರಾ? ಕಣ್ಣಾಪಂಡಿತ್ರು?" ಬೆಪ್ಪಾಗಿತ್ತು ಗುತ್ತಿಯ ದನಿ. "ಹ್ಞೂಂ ಮತ್ತೆ! ನಿನ್ನಾಹ್ಞಂಗೇ ಆತನೂ ತೋರಿಸಿದ್ದ ನಂಗೆ!"[೧] ಭಾಷೆಯ ದುಡಿಮೆ ಈ ಪಾತ್ರಗಳ ಅಂತರಂಗ ಚಿತ್ರವನ್ನು ಎತ್ತಿ ಹಿಡಿಯುತ್ತದೆ.

ಮಲೆನಾಡಿಗೆ ಘಟ್ಟದ ಕೆಳಗಿನಿಂದ ಕೆಲಸಕ್ಕೆ ಬಂದಿರುವ ಸೇರೆಗಾರರ ಮಾತುಗಳನ್ನು ಗಮನಿಸಬೇಕು:

"ಹಾಂಗೆ ಮಾಡುಕಾಗ ಕಾಣೆ! ಈವತ್ತೇ ಕಳಿಸಬೇಕೆಂಬ್ರೂ!
ಕಳಿಸಿನಿ, ಬಿಡಿನಿ! ನಾಹೊತೆ! ನಮ್ಮ ಗೌಡರಿಗೆ ತಲೆ ಕೆಟ್ಟತ್ತಂಬ್ರು!
ಈವತ್ತು ಇದ್ದ ಬುದ್ಧಿ ನಾಳೆ ಇರಲಿಕ್ಕಿಲ್ಲ!–ನೀವು ಕಳಿಸಿದರೆ
ಕಳಿಸಿನಿ!ಬಿಟ್ಟರೆ ಬಿಡಿನಿ!ನಾನು ಹೋಗಿ ಬತ್ತೆ"[೨]

ಮಲೆನಾಡಿನ ಮಳೆಗೆ ಅತ್ಯಂತ ವಿಶಿಷ್ಟವಾದ ಸ್ಥಾನವಿದೆ. ಅದು ಬಯಲು ಸೀಮೆ ಮಳೆಯಂತೆ ಮೇಲುಮಳೆಯಲ್ಲ. ಅದರ ಬಿರುಸೇ ಬೇರೆ. ಈ ಮಳೆ ಈ ಪ್ರದೇಶಕ್ಕೇ ಸೀಮಿತವಾದುದು. ಅದು ಅಲ್ಲಿನ ಬದುಕನ್ನು ತನ್ನದೇ ರೀತಿಯಲ್ಲಿ ರೂಢಿಸುತ್ತದೆ. ಮುಂಗಾರು ಮಳೆ ಹೊಡೆಯುವ ಬಗೆಯನ್ನು ಕುವೆಂಪು ಅವರ ಭಾಷೆ ಹೀಗೆ ಸೆರೆಹಿಡಿಯುತ್ತದೆ.

---

೧. ಕುವೆಂಪು 'ಮಲೆಗಳಲ್ಲಿ ಮದುಮಗಳು' ಪು. ೨೮, ಉದಯರವಿ ಪ್ರಕಾಶನ, ಮೈಸೂರು.

೨. ಕುವೆಂಪು 'ಕಾನೂರು ಹೆಗ್ಗಡತಿ' ಪು. ೪೩೪, ಉದಯರವಿ ಪ್ರಕಾಶನ, ಮೈಸೂರು, ೨೦೧೦.

"ಗಗನದಲ್ಲಿ ಕಿಕ್ಕಿರಿದು ಉನ್ಮತ್ತ ರಭಸದಿಂದ ಚಲಿಸುತ್ತಿದ್ದ ಕಾರ್ಮುಗಿಲು, ಕ್ಷಣಕ್ಷಣಕ್ಕೂ ರೇಖಾರೂಪದ ಅಗ್ನಿ ಪ್ರವಾಹದಂತೆ ಕಾಳ ಮೇಘಗಳ ಮಧ್ಯೆ ಮಧ್ಯೆ ಶಾಖೋಪಶಾಖೆಗಳ ಲತಾ ವಿನ್ಯಾಸದಿಂದ ತಟಕ್ಕನೆ ಹೊಮ್ಮಿ ಹರಿದು, ಕಣ್ಣು ಕೋರೈಸಿ ಮಾಯವಾಗುತ್ತಿದ್ದ ಮಿಂಚು, ಒಡನೆಯೇ ಕಿವಿ ಬಿರಯುವಂತೆ ಕೇಳಿ ಬರುತ್ತಿದ್ದ ಗುಡುಗು ಸಿಡಿಲುಗಳ ಭಯಂಕರ ಧ್ವಾನ. ಉನ್ಮಾದಗ್ರಸ್ತವಾಗಿ ರುದ್ರಪ್ರಲಯ ಕರ್ಮಮುಖವಾದ ನಿರಾಕಾರ ರಾಕ್ಷಸನಂತೆ ಭೋರೆಂಬ ಘೋರನಾದದಿಂದ ಸುತ್ತಮುತ್ತಣ ತುಂಗ ವೃಕ್ಷ ಸಮೂಹದ ಅರಣ್ಯ ಶ್ರೇಣಿಗಳನ್ನು ನಿರ್ದೆಯಿಂದ ಮುರಿದು ಮಥಿಸುತ್ತಿದ್ದ ಕಾರ್ಗಾಲದ ಬಿರುಸು ಬಿರುಗಾಳಿ, ಬಾನು ಭೂಮಿಗಳಿಗಿದ್ದ ಪ್ರತ್ಯೇಕತೆಯನ್ನು ಅಳಿಸುವಂತೆ ಅವಿಚ್ಛಿನ್ನ ಧಾರಾಪ್ರವಾಹದಿಂದ ನಾಡನ್ನೆಲ್ಲ ಯುವನಿಕಾವೃತವಾದಂತೆ ಮಸಗುಮಾಡಿದ್ದ ಭೀಷಣವರ್ಷ ಸೌಂದರ್ಯ. ಪಳಪಳನೆ ಸುರಿದು ನೆಲವನ್ನೆಲ್ಲ ತುಂಬುತ್ತಿದ್ದ ಬಿಳಿಯ ಹೇರಾಲಿ ಕಲ್ಲುಗಳ ರಮಣೀಯತೆ, ಇವುಗಳಿಂದ ಮನಸ್ಸು ಭಾವ ಭೂಮಿಕೆಗೇರಿದ್ದ ಹೂವಯ್ಯನಿಗೆ ತಾನಿದ್ದ ಸ್ಥಳದ ಕ್ಷುದ್ರತೆಯಾಗಲಿ ಅಸಹ್ಯವಾಗಲಿ, ದುರ್ವಾಸನೆಯಾಗಲಿ ತಿಳಿಯುವಂತಿರಲಿಲ್ಲ"[೧].

ಕುವೆಂಪು ಅವರು ಮಲೆನಾಡಿನ ಪಕ್ಷಿ ಸಂಕುಲ ಸಮಸ್ತವನ್ನು ಕಥಾಭಿತ್ತಿಯ ಪರಿಕರಗಳನ್ನಾಗಿ ಬಳಸಿಕೊಳ್ಳುತ್ತಾರೆ. ಕುವೆಂಪು ಕೇವಲ ಕಾಜಾಣ ಪ್ರಿಯರಲ್ಲ. ಹೆಸರೇ ಕೇಳರಿಯದ ನೂರಾರು ಪಕ್ಷಿಗಳ ಚಲನವಲನಗಳನ್ನು ಅವರು ಗುರುತಿಸಿದ್ದಾರೆ. ಹೊತ್ತು ಕೂತು ಕೂಗುವ ಕಾಡು ಕೋಳಿ ಹುಂಜ, ಸಂಗೀತ ಸ್ಫೋಟದಲ್ಲಿ ತೇಲಿಸುವ ಕಾಜಾಣ, ಚಕಿತವಾಣಿಯ ಗಿಳಿವಿಂಡು, ಮಿಂಚುಳ್ಳಿ, ಚೋರೆ, ಕುಟಿರ, ಲಲನಾಕಂಠ ಕಾಮಳ್ಳಿ, ತನ್ನ ಧ್ವನಿಯಿಂದ ಕಾಡನ್ನು ಭಯಗೊಳಿಸುವ ಮುಂಗಟೆಹಕ್ಕಿ, ಪೊದೆಗಿಡಗಳಲ್ಲಿ ಕೂತಿರುವ ಪಿಕಳಾರ, ಸಿಳ್ಳಿನ ರೀತಿಯಲ್ಲಿ ಅಲಾಪನೆ ಮಾಡುವ ಮಡಿವಾಳ ಹಕ್ಕಿ, ಚಿಟ್ಟಿಕೋಳಿ, ಗಿಜಗಾರ್ಲು ಹಕ್ಕಿ, ಉರುಳಿಹಕ್ಕಿ, ಕುಪ್ಪಳಿಸಿ ಹಾರುವ ಹೊರಸಲ ಹಕ್ಕಿ, ಹಾಡುತ್ತ ಹಾರುವ ತೇನೆಹಕ್ಕಿ, ವಿಕಟನಾದಮಾಡುವ ಶಕುನಿಹಕ್ಕಿ ವಿಕಾರವಾಗಿ ಕೂಗುವ ಕುರುಡುಗಪ್ಪಟೆಹಕ್ಕಿ, ಹರಡಹಕ್ಕಿ. . .. ಇತ್ಯಾದಿ ಹೆಬ್ಬಾವು, ದೊಡ್ಡು, ಹಂದಿ, ಮೊಲ, ಬೆಳ್ಳಿಲಿ, ಕಾರೇಡಿ, ಬೆಳ್ಳೇಡಿ, ಅವಲು ಮೀನುಗಳು, ಕಾವೇಲಿ, ಏಡಿ, ಚಟ್ಟಂಗ, ಸೀಗಡಿ, ಹೆಣ್ಣೋತಿ, ಚಿಗಳಿ, ಇರುವೆ, ಕಾಡುಜೇಡ, ಮುಸಿಯ, ಕಾಡುಹಂದಿ, ಕಣೇಹಂದಿ ಇವೆಲ್ಲವೂ ಪ್ರಾದೇಶಿಕ ವಿಶಿಷ್ಟವಾದವು ಮಾತ್ರವಲ್ಲದೆ ಕಾದಂಬರಿಗಳ ಕ್ರಿಯೆಗೆ ಪೂರಕವಾಗಿಯೂ ಪೋಷಕವಾಗಿಯೂ ಆಗಿ ಬರುತ್ತವೆ.

---

೧. ಕುವೆಂಪು, ಕಾನೂರು ಹೆಗ್ಗಡತಿ, ಪು. ೧೯೬

ಮಲೆನಾಡನ್ನು ಭಯಂಕವಾಗಿ ಕಾಡುತ್ತಿರುವ ಮೂಢನಂಬಿಕೆಗಳಲ್ಲಿ ದೆವ್ವದ ನಂಬಿಕೆಯೂ ಒಂದು. ಅದು ಅಲ್ಲಿ 'ದೆವ್ವ'ದ ಸ್ಥಾನದಿಂದ 'ಭೂತರಾಯ'ನ ಪಟ್ಟಕ್ಕೆ ಏರಿದೆ. ಈ ನಂಬಿಕೆಯನ್ನು ಬ್ರಾಹ್ಮಣ, ಒಕ್ಕಲಿಗರು ಅಚಲವಾಗಿ ನಂಬುವುದರ ಜೊತೆಗೆ, ಅದನ್ನು ಒಂದು ಶೋಷಣಾಸ್ತ್ರವನ್ನಾಗಿ ಬಳಸಿಕೊಂಡು ದಲಿತವರ್ಗವನ್ನು ಶೋಷಣೆ ಮಾಡುತ್ತಾರೆ. ಮಾಡುವ ಎಲ್ಲ ತಪ್ಪುಗಳನ್ನು ಮಾಡಿ ಆ ಭೂತರಾಯನಿಗೆ ಹರಕೆ ಕಟ್ಟುವುದು ಮಲೆನಾಡಿನಲ್ಲಿ ಮಾಮೂಲು. ಕುವೆಂಪು ಅವರ ಮಾತಿನಲ್ಲಿ ಹೇಳುವುದಾದರೆ:

"ಪ್ರಕೃತಿಯ ಮಧ್ಯೆ ವೈಚಾರಿಕತೆಯಾಚೆ ಬೆಳೆದ ಮಲೆನಾಡ ಮುಗ್ಧಜನ ತಮ್ಮ ದಿನಚರಿಯ ಯಾವ ಘಟನೆಯನ್ನು ಭೂತರಾಯನನ್ನು ಮರೆತು ಮಾಡುತ್ತಿರಲಿಲ್ಲ. ಅಷ್ಟೇ ಅಲ್ಲ ನಿಸರ್ಗದ ಮಧ್ಯೆ ಮೈಮರೆತು ಭಾವ ಸಮಾಧಿಯಲ್ಲಿ ಮುಳುಗುವ ಹೂವಯ್ಯನ ಮೇಲೆ 'ದೆವ್ವ ಬರುವಂತೆ' ಅಥವಾ ದೆವ್ವ ಹಿಡಿಯುವಂತೆ' ಕಾಣುತ್ತದೆ."[೧]

ಹೂವಯ್ಯನ ತಾಯಿ ನಾಗಮ್ಮ ತನ್ನ ಕಾಯಿಲೆಗೆ ಮಗ ಮನೆಯಲ್ಲಿ ಬಲಿಕೊಡದೆ ಇಟ್ಟುಕೊಂಡಿರುವ ಹೋತವೇ ಕಾರಣ ಎಂದುಕೊಳ್ಳುತ್ತಾರೆ.

"ಎಲ್ಲ ಭೂತರಾಯನ ಚೇಷ್ಟೇ ಕಣೋ! ಅದಕ್ಕೆ ಕೊಡೋ ಆಯಾರಾನ ಕೊಡದೆ ಮೋಸಮಾಡಿ ಇಟ್ಟುಕೊಂಡಿಯಲ್ಲೋ! ಅದಕ್ಕೆ ಬದಲಾಗಿ ನನ್ನ ತಗೊಂಡು ಹೋಗ್ದೆ ಇರ್ತದೇನೋ! ಸಾಕು ಬಿಡೋ ನಿನ್ನ ಔಸ್ತಿ! ಔಸ್ತಿಯಿಂದ ಏನಾಗ್ತದೋ?... ನಾನು ಹೋದ್ರೂ ಚಿಂತೆಯಿಲ್ಲ ಕಣೋ! ನೀನು, ನಿನ್ನ ಹೋತ, ಸುಖವಾಗಿರ್ರೋ?"[೨]

ತಾಯಿಯ ನಂಬುಗೆಯಿಂದಾಗಿ ಆಕೆಯ ಕಾಯಿಲೆ ಗುಣವಾಗಬಹುದೆಂದು ನಂಬಿ–ಹೂವಯ್ಯನು ಹೋತವನ್ನು ಬಲಿಕೊಡಲು ತೀರ್ಮಾನಿಸುವ ಸಂಗತಿ, ಆ ಪ್ರದೇಶದ ಮೌಢ್ಯದ ಆಳ್ವಿಕೆಯ ಪರಾಕಾಷ್ಠೆಯನ್ನು ಸೂಚಿಸುತ್ತದೆ. ಅದು ಕಾದಂಬರಿಯ ಗತಿಯನ್ನು ನಡೆಸುವ ಪರಿಕರವಾಗಿಯೂ ಸಾವಯವ ಸ್ಥಾನವನ್ನು ಪಡೆಯುತ್ತದೆ.

ಕುವೆಂಪು ಅವರು ಪ್ರಾದೇಶಿಕಾಂಶಗಳನ್ನು ಕೇವಲ ಅವುಗಳನ್ನು ಮಲೆನಾಡಿನ ಹೊರಜಗತ್ತಿಗೆ ಪರಿಚಯ ಮಾಡಿಕೊಡುವ ಉದ್ದೇಶದಿಂದ ತಂದಿಲ್ಲ. ಅವು ಕಥೆಯಂತೆಯೇ ಪಾತ್ರಗಳಂತೆಯೇ ಕಾದಂಬರಿಯ ಬಂಧದಲ್ಲಿ ಹಾಸುಹೊಕ್ಕಾಗಿ ಹೆಣೆದುಕೊಂಡು ಬದುಕನ್ನು ದಟ್ಟವಾಗಿಸುತ್ತಾ ಸಾಗುತ್ತವೆ.

---

೧. ಕುವೆಂಪು, ಕಾನೂರು ಹೆಗ್ಗಡತಿ, ಪು. ೧೯೬

೨. ಅದೇ, ಪು. ೫೭೨.

ಪ್ರಾದೇಶಿಕತೆ ಕಥೆಯೊಡನೆ ಬಿಡಿಸಲಾಗದ ಹಾಸುಹೊಕ್ಕಿನಂತೆ ಕೂಡಿಬಿಟ್ಟಿರುವುದರಿಂದ 'ಕಾನೂರು ಹೆಗ್ಗಡಿತಿ'ಯ ಪುಟ್ಟಣ್ಣನಾಗಲಿ, 'ಮಲೆಗಳಲ್ಲಿ ಮದುಮಗಳು'ವಿನ ಸಿಂಬಾವಿ ಗುತ್ತಿಯನ್ನಾಗಲಿ ಅವರ ಆವರಣದಿಂದ ಬಿಡಿಸಿ ಪ್ರತ್ಯೇಕವಾಗಿ ಪರಿಶೀಲಿಸುವುದು ಅಸಾಧ್ಯವೆನಿಸುತ್ತದೆ. ಒಂದು ವೇಳೆ ಹಾಗೆ ನಾವು ಅವರನ್ನು ಕಲ್ಪಿಸಿಕೊಂಡರೆ ಅವರು ತಮ್ಮೊಡನೆ ಕತ್ತಲೆಗಿರಿಯ ಸರುವನ್ನೇ ಹುಲಿಕಲ್ ಘಾಟಿಯನ್ನೇ ಹೊತ್ತು ತರುತ್ತಾರೆ.

ಹಾಗೆ ನೋಡಿದರೆ 'ಕಾನೂರು ಹೆಗ್ಗಡತಿ'ಯಲ್ಲಿ ಕಾಡು ಕೂಡ ಜೀವಂತವಾಗಿ ಬೃಹತ್ ಲವಲವಿಕೆಯ ಪಾತ್ರವೆನ್ನಿಸುತ್ತದೆ. ಅದರ ಸ್ಥೂಲ ಹಾಗೂ ಸೂಕ್ಷ್ಮಸ್ವರೂಪದ, ಅನವರತ ಚಟುವಟಿಕೆ, ಅತ್ಯಗಾಧ ಪ್ರಭಾವಗಳ ಅರಿವು ಹೆಜ್ಜೆ ಹೆಜ್ಜೆಗೂ ನಮಗಾಗುತ್ತದೆ. ಅದರ ಸೌಮ್ಯ ರುದ್ರ ಮನೋಹರ ಕರ್ಕಶ ಚಹರೆ ಜೀವಪೋಷಕ ಧಾರಾಳತನ ಹಾಗೂ ವಿನಾಶಕಾರ ಕಠೋರತೆ, ಅದರ ನಿಗೂಢತೆ ಅಮೇಯತೆಗಳು ನಮ್ಮನ್ನು ಅವಾಕ್ಕಗಿಸುತ್ತವೆ. ಅದರ ಸರ್ವಾಂತರ್ಯಾಮಿತ್ವದ ಅಕ್ಷತಭವ್ಯವಾದ ಅಸ್ತಿತ್ವ ಕಾದಂಬರಿ ಓದಿ ಮುಗಿಸಿದ ಅನೇಕ ವರ್ಷಗಳ ಮೇಲೂ ನಮ್ಮ ಮನಸ್ಸಿನಲ್ಲಿ ಸ್ಪಷ್ಟವಾಗಿ ಉಳಿಯುತ್ತದೆ. 'ಮಲೆಗಳಲ್ಲಿ ಮದುಮಗಳು'ವಿನ ಗುತ್ತಿಯ ನಾಯಿ ಹುಲಿಯ ಕೂಡ ಇಂಥದೇ ಒಂದು ವಿಶೇಷ ಪಾತ್ರ. ಪ್ರಾರಂಭದಿಂದ ಅದು ತುಂಗಾ ನದಿಯಲ್ಲಿ ಕೊಚ್ಚಿ ಹೋಗುವ ತನಕವೂ ನಮಗೆ ಆಪ್ತವಾಗಿದ್ದು, ಹಠಾತ್ತನೆ ನೀರು ಪಾಲಾದಾಗ ಮನಸ್ಸಿಗೆ ತಣ್ಣನೆಯ ನೋವು ಆವರಿಸುತ್ತದೆ.

ಪ್ರಾದೇಶಿಕತೆ ಕಾದಂಬರಿಯಲ್ಲಿ ನಿರ್ವಹಿಸುವ ಕೆಲವು ಕೆಲಸಗಳನ್ನು ಸೂಚಿಸಿದ್ದಾಯಿತು. ಅದು ತನ್ನ ಮಾಮೂಲು ಅರ್ಥವನ್ನು ವ್ಯಕ್ತಗೊಳಿಸುವುದರ ಜೊತೆಗೆ ಅತಿಶಯಾರ್ಥ ದ್ಯೋತಕವೂ ಆದಾಗ ಕಾದಂಬರಿಗೆ ಬೇರೊಂದು ಆಯಾಮವೇ ಲಭಿಸಿದಂತಾಗುತ್ತದೆ. ನಮಗೆ ಅಲ್ಪ ಪರಿಚಿತವೋ ತೀರಾ ಅಪರಿಚಿತವೋ ಆದ ಭೂಭಾಗವೊಂದರ ನಿಸರ್ಗ ಮತ್ತು ಸಮಾಜದ ಆಚಾರ ವಿಚಾರಗಳು ಕುತೂಹಲ ಕೆರಳಿಸುತ್ತವೆ. ಅವುಗಳ ಕಲಾತ್ಮಕ ಅಭಿವ್ಯಕ್ತಿ ನಮ್ಮ ಆಸಕ್ತಿಯನ್ನು ತನ್ನಲ್ಲಿ ತೊಡಗಿಸುತ್ತದೆ. ಆದರೆ ಅಭಿವ್ಯಕ್ತಿಯ ಕೆಲಸ ಅಲ್ಲಿಗೇ ಮುಗಿದು ಹೋದರೆ ಆ ಕೃತಿಗೆ ಹಿರಿಮೆ ಲಭಿಸುವುದಿಲ್ಲ. ಒಂದು ಪರಿಸರದಲ್ಲಿ ಬಾಳ್ವೆಯ ಹೋರಾಟ, ಸವಾಲು, ಸಮಸ್ಯೆಗಳು, ವ್ಯಕ್ತಿಯ ಒಳ ತುಯ್ತ ಆದರ್ಶ ಮಹತ್ವಾಕಾಂಕ್ಷೆಗಳು ನಿಶ್ಚಿತವಾದ ಅರ್ಥವನ್ನು ಹೊಮ್ಮಿಸುವುದರ ಜೊತೆಗೆ ಮಾನವನ ಮೂಲಭೂತವೂ, ಸಾರ್ವತ್ರಿಕವೂ, ಕಾಲದೇಶಾತೀತವೂ ಆದ ಪ್ರವೃತ್ತಿ ಹಾಗೂ ಮೌಲ್ಯಗಳಿಗೆ ಸೂಚಕವಾಗಿರಬೇಕಾಗುತ್ತದೆ.

ಸಾಂತ ಅರ್ಥವಲಯವನ್ನು ಉತ್ತರಿಸಿ ಅನಂತಾರ್ಥದ ಸನ್ನೆ ಸೂಕ್ಷ್ಮಗಳನ್ನು, ಹೊಳಹುಗಳನ್ನು ಪ್ರಾದೇಶಿಕತೆ ನಮಗೆ ಎಷ್ಟೆಷ್ಟು ನಿಚ್ಚಳವಾಗಿ ಮಾಡಿಕೊಡುತ್ತದೋ ಅಷ್ಟಷ್ಟು ಆ ಕೃತಿಕಾಲದೊಂದಿಗೆ ಹೆಜ್ಜೆಗೂಡಿಸಿ ಮುನ್ನಡೆಯುತ್ತದೆ.ನಮಗೆ ಸಂತತ ವರ್ತಮಾನವನ್ನು ಸೃಷ್ಟಿಸಿಕೊಡುತ್ತದೆ. ನಮ್ಮ ಸಂವೇದನೆಯನ್ನು ಫಲವತ್ತಾಗಿಸುವ ಅಂಥ ಕೃತಿಗಳು ಅತ್ಯಂತ ವಿರಳ. ತಮ್ಮ ಜೀವನಾನುಭವದ ತುಂಬು ತನಿ ಸಾರವನ್ನೇ ತಮ್ಮ ಕಾಲಮಾನದ ಅಮೂಲ್ಯ ಅರ್ಕವನ್ನೇ ಒಂದೆರಡು ಕಾದಂಬರಿಗಳಲ್ಲಿ ಶೇಖರಿಸಿಟ್ಟು, ಭವಿಷ್ಯಕ್ಕೂ ಸವಾಲಾಗಿ ಉಳಿದಿರುವ ರಷ್ಯನ್ ಮಹಾ ಲೇಖಕರ ಸಾರಸ್ವತ ಸ್ವತ್ತು ಈ ನಮೂನೆಯದು. ಈ ಮಾತನ್ನು ಅಳುಕಿಲ್ಲದೆ ಕುವೆಂಪುರವರ ಕಾದಂಬರಿಗಳ ಬಗ್ಗೆಯೂ ಹೇಳಬಹುದು. 'ಕಾನೂರು ಹೆಗ್ಗಡತಿ' ಪ್ರಕಟವಾಗಿ ಹಲವಾರು ದಶಕಗಳೇ ಕಳೆದಿದ್ದರೂ ಅದು ಇವತ್ತಿಗೂ ಚರ್ಚಿತವಾಗುತ್ತಿದೆ. ಶಿಷ್ಟ ವಾಚಕರನ್ನು ಸಂಪಾದಿಸಕೊಳ್ಳುತ್ತಿದೆ. ಸಂವೇದನೆಯನ್ನು ವರ್ಧಿಸುವುದರಲ್ಲಿ ಅಲಕ್ಷಿಸಲಾಗದ ಪಾತ್ರಗಳನ್ನು ವಹಿಸುತ್ತದೆ.

ಸುಬ್ಬಮ್ಮ ತನ್ನ ಬಡತನದ ಹಿನ್ನೆಲೆಯ ದೆಸೆಯಿಂದ ಶ್ರೀಮಂತ ಗಂಡನ ಮನೆಯ ಹೊಸ ವಾತಾವರಣದಲ್ಲಿ ಪಟ್ಟಪಾಡು, ಹೊಂದಿದ ಅವಸ್ಥಾಂತರ, ಅಪಮಾನಗಳು ಮಲೆನಾಡಿಗೇ ವಿಶಿಷ್ಟವೆಂದು ಕಾದಂಬರಿ ಓದಿದಾಗ ಕಂಡುಬಂದರೂ, ಅವು ನಮ್ಮ ಒಟ್ಟಿಗೆ ಗ್ರಾಮೀಣ ಪರಿಸರದ ಅಸಮಾನತೆ, ಕಟ್ಟಳೆ ಕುಟುಂಬ ವ್ಯವಸ್ಥೆಯ ನಿಷ್ಠುರತೆಯನ್ನು ಧ್ವನಿಸುತ್ತದೆ. ದೆಯ್ಯದ ಹರಕೆಯಲ್ಲಿ ಬಲಿಗೊಡಲು ಅಣಿಗೊಳಿಸಿದ ಹೋತದ ಬಗೆಗಿನ ಕಾನೂರಿನ ಜನರ ನಿರ್ದಯತೆಗೂ ಹೂವಯ್ಯನಂಥ ಸೂಕ್ಷ್ಮ ಸಂವೇದನಾಶಾಲಿ ಸುಶಿಕ್ಷಿತ ತಾಳುವ ಕರುಣೆಯ ನಿಲುವಿಗೂ ಇರುವ ಅಂತರ ಕೂಡ ಗಮನಾರ್ಹ. ಅದು ನಮ್ಮ ದೇಶದ ಮೂಲಭೂತವಾದ ನಂಬಿಕೆ ಆಚಾರಗಳ ಸಮಸ್ಯೆಗಳ ಕಡೆಗೇ ಬೊಟ್ಟು ಮಾಡಿದಂತಿದೆ. ಮತಧರ್ಮಗಳ ಅವಿವೇಕದ ಸದ್ದುಗದ್ದಲದ ಸರ್ವವ್ಯಾಪೀ ಹಬ್ಬುಗೆಯ ನಡುವೆಯೂ ಅಪರೂಪಕ್ಕೆ ಕೇಳಿಸುವ ಅಂತಃಸಾಕ್ಷಿ ಪ್ರಮಾಣಿತವಾದ ವಿವೇಕದ ದಿಟ್ಟ ಮಾನವೀಯ ದನಿಯನ್ನು ನೆನಪಿಸುತ್ತದೆ.

ಮೊತ್ತದಲ್ಲಿ, ಸ್ಥಳೀಯ ಅಂಶ ತನ್ನಷ್ಟಕ್ಕೆ ತಾನು ಗುಣವೂ ಅಲ್ಲ, ಅಪಗುಣವೂ ಅಲ್ಲ, ಕಾದಂಬರಿಯ ವಿಭಿನ್ನಾಂಶಗಳ ಜೊತೆಗೆ ಹೊಂದಿಕೊಂಡು ಅಪೂರ್ವಾರ್ಥ ದ್ಯೋತಕವೆನ್ನಿಸಿದಾಗ ಅದು ಅಪೇಕ್ಷಣೀಯವಷ್ಟೇ ಅಲ್ಲ, ಮಾನ್ಯವೂ ಹೌದು. ಕೃತಿಗೆ ನೈಜತೆಯನ್ನು ಕೂಡಿಸುವುದರಲ್ಲಿ ಅದಕ್ಕೆ ಸರಿಮಿಗಿಲಾದದ್ದು ಮತ್ತೊಂದಿಲ್ಲ.

ಪ್ರಾದೇಶಿಕತೆಯ ಸೊಗಡನ್ನು ಈ ಕಾದಂಬರಿಯಲ್ಲಿ ಬಳಕೆಯಾಗಿರುವ ವಿವಿಧ ಛಾಯೆಗಳ ಗ್ರಾಮ್ಯಭಾಷೆ ತೀವ್ರವಾಗಿ ವೇದ್ಯವಾಗಿಸುತ್ತದೆ. ಕುವೆಂಪು ಅವರು ಪ್ರಕೃತಿಯನ್ನೋ, ಮನೆಯನ್ನೋ ಪಾತ್ರಗಳನ್ನೋ, ಪಾತ್ರವೊಂದು ಮನೋವಿಶ್ಲೇಷಣೆ ಮಾಡಿಕೊಳ್ಳುವುದನ್ನೋ ಕುರಿತು ಬಳಸುವ ವರ್ಣನಾತ್ಮಕ ಭಾಷೆಗೂ ಪಾತ್ರಗಳ ಸಂವಾದದ ಮಾತುಗಳಿಗೂ ಅಂತವಿರುವುದು ಸಹಜವೇ. ಪಾತ್ರಗಳಾಡುವ ಮಾತುಗಳು ಆ ನೆಲದ ತಿರುಗಳಲ್ಲಿ ಹೊರಳಿ ಬಂದಷ್ಟು ಆಪ್ತವಾಗಿ ರುಚಿಕಟ್ಟಾಗಿ ಕಾಣಿಸುತ್ತವೆ. ಕುವೆಂಪು ಅವರು ವರ್ಣನೆಗೆ ಅದರಲ್ಲೂ ನಿಸರ್ಗವರ್ಣನೆಗೆ ಬಳಸುವ ನಿರೂಪಣಾತ್ಮಕ ಭಾಷೆ, ಈ ನೆಲದ ಭಾಷೆಯಾಗಿದೆ. ಕಾದಂಬರಿಯ ನಲ್ವತ್ತೈದನೆಯ ಅಧ್ಯಾಯದಲ್ಲಿ ಮಳೆಗಾಲದ ವರ್ಣನೆಯ ಸಂದರ್ಭದಲ್ಲಿ ಬರುವ ನಿರೂಪಕನ ವ್ಯಾಖ್ಯಾನ ಈ ಭಾವನೆಯನ್ನು ಮೂಡಿಸುತ್ತದೆ.

ಯಾರು ಬದುಕಲಿ, ಯಾರು ಸಾಯಲಿ, ಯಾರು ಹುಟ್ಟಲಿ, ಹುಟ್ಟದೆ ಹೋಗಲಿ, ಮಳೆಗಾಲ ನಿಲ್ಲುತ್ತದೆಯೇ? ಮಳೆ ಹಿಡಿದು ಕೂತಿತ್ತು. ನಾಲ್ಕು ಪಾದಗಳನ್ನೂ ಬಲವಾಗಿ ಊರಿ! ಮೋಡ ಸದಾ ಕವಿದು ಸೂರ್ಯದರ್ಶನವು ಅಪೂರ್ವವಾಯಿತು. ತನ್ನ ದುರ್ದಮ್ಯ ವ್ಯಾಪಾರಗಳನ್ನು ನಿರ್ಲಕ್ಷ್ಯವಾಗಿ ನಿರ್ದಾಕ್ಷಿಣ್ಯವಾಗಿ ಸಾಗಿಸಿತ್ತು ಬೃಹತ್ ಪ್ರಕೃತಿ. ಆ ಪ್ರಕೃತಿಯ ಪ್ರತಿರೂಪಾದ ಸಹ್ಯಾದ್ರಿ ಪರ್ವತ ಕಾನನ ಶ್ರೇಣಿ ಮನುಷ್ಯನ ಅಲ್ಪ ಸುಖ ದುಃಖಗಳಿಗೆ ಸಂಪೂರ್ಣ ನಿಸ್ಸಂಗಿಯಾಗಿ ಭೀಷಣ ವರ್ಷಧಾರೆಯಲ್ಲಿ ತೊಪ್ಪನೆ ತೊಯ್ಯುತ್ತಾ ಹಬ್ಬಿ ಕೊಬ್ಬಿ ಉಬ್ಬಿ ನಿಂತಿತ್ತು.

ಆ ಭೂಮಿ ನಿಸರ್ಗದ ಮುಂದೆ ಹಳೆಮನೆ, ಕೋಣೂರು, ಹೂವಳ್ಳಿ, ಬೆಟ್ಟಳ್ಳಿ ಮತ್ತು ಸಿಂಬಾವಿಯಂತಹ ಏಕ ಗೃಹ ಕ್ಷುದ್ರಗ್ರಾಮಗಳ ಬದುಕಿನ ಆಶೆ ನಿರಾಶೆ ಕಷ್ಟ ಸುಖ ಶೋಕ ತಾಪಾದಿಗಳು ಯಃಕಶ್ಚಿತವಾಗಿದ್ದುದರಲ್ಲಿ ಆಶ್ಚರ್ಯವೇನು? ತಂದೆ ತಾಯಿಯರನ್ನು ಏಕಕಾಲದಲ್ಲಿ ಅನಿರೀಕ್ಷಿತವಾಗಿ ಕಳೆದುಕೊಂಡ ಧರ್ಮುವಿನ ಮನಃಸ್ಥಿಯಾಗಲಿ, ತಾನು ಬಯಸಿದ ಹೆಣ್ಣು, ಆ ಹೆಣ್ಣಿನ ಇಚ್ಚೆಗೂ ವಿರುದ್ಧವಾಗಿ, ಮತ್ತೊಬ್ಬನ ಪಾಲಾಗುತ್ತಿದೆಯಲ್ಲಾ ಎಂಬ ಮುಕುಂದಯ್ಯನ ಹೃದಯವ್ಯಥೆಯಾಗಲಿ, ತಾನು ಹಾರಿಸಿಕೊಂಡು ಬಂದು ಮದುವೆಯಾಗಿದ್ದ ಹುಡುಗಿಯನ್ನು ಮತ್ತೆ ತವರಿಗೊಯ್ದು ಬಲಾತ್ಕಾರವಾಗಿ ಮತ್ತೊಬ್ಬನಿಗೆ ಮದುವೆ ಮಾಡಿಸುತ್ತಾರೆ ಎಂಬ ವಾರ್ತೆಯ ಬಡಬಾಗ್ನಿಯನ್ನು ಹೊಟ್ಟೆಯೊಳಗಿಟ್ಟುಕೊಂಡು ಹೇಗೋ ಉಪಾಯದಿಂದ ಪೊಲೀಸರ ಕೈಯಿಂದ ತಪ್ಪಿಸಿಕೊಂಡು ಮಳೆಗಾಲದ ಕಾಡಿನಲ್ಲಿ ತಲೆಮರೆಸಿಕೊಂಡು ಕಾಲಹಾಕುತ್ತಿರುವ ಗುತ್ತಿಯ ಧಾರುಣ ಚಿತ್ತ ಸ್ಥಿತಿಯಾಗಲಿ, ನಿರಂತರ ರೋಗಿಷ್ಟನಾಗಿದ್ದರೂ ತನ್ನನ್ನು ಒಲಿದು ಬದುಕು ಸಾಗಿಸುತ್ತಿದ್ದಾಳಲ್ಲ ಎಂದು ಒಳಗೊಳಗೆ

ಕೊರಗಲಾರಂಭಿಸಿರುವ ಪಿಜಿಣನ ಬಾಳ ಬೇಗೆಯಾಗಲಿ, ಕಡೆಗೆ ಪಾದ್ರಿಯಿಂದ ಅನೇಕಾನೇಕ ಪಾರಿತೋಷಕಗಳನ್ನು ಪಡೆದು, ಆತನಿಗೆ ತಾನು ಕ್ರೈಸ್ತ ಜಾತಿಗೆ ಸೇರುತ್ತೇನೆ ಎಂಬ ನಂಬುಗೆ ಬರುವಂತೆ ಮಾಡಿ, ಒಂದು ರೀತಿಯಲ್ಲಿ ಮಾತನ್ನೂ ಕೊಟ್ಟು ಈಗ ಅದರಿಂದ ನುಣುಚಿಕೊಳ್ಳಲು ಹವಣಿಸುತ್ತಿರುವ ದೇವಯ್ಯನ ಹಾಸ್ಯಾಸ್ಪದವಾದ ಒಳತೋಟಿಯಾಗಲಿ ಆ ಸಹ್ಯಾದ್ರಿಯ ಮೇಲೆ ಕಾಡು ಮಳೆ ಇವುಗಳ ಕಡೆಗಣ್ಣಿನ ಗಮನಕ್ಕಾದರೂ ಬರುತ್ತವೆಯೇ?[೧] ವ್ಯಾಖ್ಯಾನದಲ್ಲಿ ಮೂಡಿಬಂದ ಈ ಅರಿವು ಪಾತ್ರಗಳ ಅನುಭವ ನೆಲೆಯಲ್ಲಿಯೂ ಅಧಿಕೃತತೆಯನ್ನು ಪಡೆಯುತ್ತದೆ.

ಪರಿಸರದ ಪ್ರತಿ ಸೃಷ್ಟಿಯಲ್ಲಿ ಪುಟ್ಟಪ್ಪನವರು 'ಕಾನೂರು ಹೆಗ್ಗಡಿತಿ'ಯಲ್ಲಿ ಸಾಧಿಸಿದ ಯಶಸ್ಸು ಅವರಿಗಿಂತ ಮೊದಲಿನ ಯಾರ ಕಾದಂಬರಿಕಾರನಿಗೂ ಸಾಧ್ಯವಾಗಿರಲಿಲ್ಲ. ಮುತ್ತಳ್ಳಿ, ಕಾನೂರು, ಕೆಳಕಾನೂರು, ಸೀತೆಮನೆ, ನೆಲ್ಲುವಳ್ಳಿ ಈ ಪಂಚಗ್ರಾಮಗಳನ್ನು ಕೇಂದ್ರವಾಗಿಟ್ಟುಕೊಂಡು ಒಂದು ಕಾಲದ ಮಲೆನಾಡಿನ ಪ್ರಾಕೃತಿಕ, ಕೌಟುಂಬಿಕ ಮತ್ತು ಗ್ರಾಮ ಜೀವನದ ದೊಡ್ಡ ಪ್ರಪಂಚವನ್ನೇ ಅವರು ನಮ್ಮೆದುರು ತೆರೆದಿಟ್ಟಿದ್ದಾರೆ. ಒಕ್ಕಲುತನ, ಬೇಟೆ ಇಲ್ಲಿಯ ಜನರ ಮುಖ್ಯ ವ್ಯವಸಾಯಗಳು. ಚಂದ್ರಯ್ಯಗೌಡ, ಶ್ಯಾಮಯ್ಯಗೌಡ, ಸಿಂಗಪ್ಪಗೌಡ, ಅಣ್ಣಯ್ಯಗೌಡರಂಥ ಒಕ್ಕಲಿಗರ ಮನೆತನಗಳು, ಅವರ ವ್ಯವಸಾಯಕ್ಕೆ ಬೇಕಾದ ವಿವಿಧ ಸ್ತರದ ವಿವಿಧ ಜಾತಿಗಳ ಆಳುಗಳು ಇವರ ಧಾರ್ಮಿಕ ಆಚರಣೆಗಳನ್ನು ನಡೆಸಿಕೊಡುವ ಅಗ್ರಹಾರದ ಜೊಯಿಸರು ಇಲ್ಲಿಯ ಸಾಮಾಜಿಕ ಸ್ತರಗಳನ್ನು ಪ್ರತಿನಿಧಿಸುತ್ತಾರೆ.

ಈಗೊಮ್ಮೆ ಆಗೊಮ್ಮೆ ಈ ಪರಿಸರವನ್ನು ಪ್ರವೇಶಿಸುವ ಪೊಲೀಸರು ಬಿಟ್ಟರೆ ಹೊರಗಿನ ನಾಗರಿಕತೆಗೆ ಪ್ರವೇಶವಿಲ್ಲ. ಈ ಪರಿಸರದ ಅವಿಭಾಜ್ಯ ಅಂಗಗಳಾದ ಕೆರೆ, ಕಾಡುಗಳು, ವನ್ಯ ಮತ್ತು ಪಾಲಿತ ಪಶುಗಳು, ಸಸ್ಯ ಪ್ರಪಂಚ, ಅಮಾನವೀಯ ಆವರಣದ ಪ್ರವೇಶಗಳು, ಮೀನು ಬೇಟೆ, ಹೊಂಡ ತೋಣಕುವುದು, ಏಡಿಶಿಕಾರಿ, ಕಳ್ಳುಕಟ್ಟುವುದು, ಮರಕುಯ್ಯುವುದು, ಗದ್ದೆ ಉಳುವುದು ಇಂಥ ವ್ಯವಹಾರಗಳೆಲ್ಲ ಈ ಪರಿಸರಕ್ಕೆ ಸಹಜವಾದ ಚಟುವಟಿಕೆಗಳು, ದೆವ್ವ ಹರಕೆ, ಕೋಳಿಯಂಕ, ಭೂಮಿ ಹುಣ್ಣಿಮೆಯ ಹಬ್ಬ ಮುಂತಾದ ಹರಿದಿನಗಳು, ಜೋಯಿಸರ ಮಂತ್ರ ತಾಯಿತಗಳು, ತೆಂಗಿನಕಾಯಿ ಮಂತ್ರಶಕ್ತಿ ಪ್ರಯೋಗ, ಮದುವೆ, ಮುಂಜಿ ಮುಂತಾದ ವ್ಯವಹಾರಗಳು ಈ ಪರಿಸರದ ಸಾಂಸ್ಕೃತಿಕ ಜೀವನ ಅಂಶಗಳು. "ಎಷ್ಟೇ ಕ್ಷುದ್ರವಾದ ವಿಷಯವಾದರೂ ಅದು ತನ್ನ ಸಂಪೂರ್ಣ ವಿವರಗಳೊಡನೆಯೇ ಕಾದಂಬರಿಯ ಅವಕಾಶವನ್ನು

---

೧. ಕುವೆಂಪು ಕಾದಂಬರಿಗಳಲಿ ಪ್ರಕೃತಿ ಮತ್ತು ಸಂಸ್ಕೃತಿ, ಜಿ.ಎಸ್.ಅಮೂರ, ಕುವೆಂಪು ಕಾದಂಬರಿಗಳು (ಸಂ) ಗುರುಪಾದ ಮರಿಗುದ್ದಿ, ಬೆಂಗಳೂರು, ೨೦೦೪, ಪು. ೨೩೫.

ತುಂಬಿಕೊಳ್ಳುತ್ತದೆ. ಬಾಹ್ಯ ಪ್ರಪಂಚ ಮತ್ತು ಭಾವ ಪ್ರಪಂಚ ಎರಡರ ಪುನರ್ ನಿರ್ಮಿತಿಯಲ್ಲಿಯೂ ವಾಸ್ತವತೆ ಸಾಧಿಸಲು ಇಲ್ಲಿ ಲೇಖಕರ ಪ್ರತಿಭೆ ದುಡಿಯುತ್ತದೆ,"[೧] ಎಂದು ಜಿ.ಎಸ್.ಅಮೂರರು ಪ್ರತಿಕ್ರಿಯಿಸುತ್ತಾರೆ.

'ಕಾನೂರು ಹೆಗ್ಗಡತಿ'ಯನ್ನು ಗಮನಿಸಿದಾಗ ಲೇಖಕರು ಪ್ರಕೃತಿ ದೃಶ್ಯವೊಂದನ್ನು ಬಣ್ಣಿಸುವಾಗ ಮಾತು ತನ್ನ ಸಮಸ್ತ ಡೌಲಿನೊಂದಿಗೆ ಮೆರವಣಿಗೆ ಹೊರಡುತ್ತದೆ. ಮಾಟಗಾರಿಕೆಯ ಇಂಥ ನಿರೂಪಣಾತ್ಮಕ ಭಾಷೆಗೂ ಹಳ್ಳಿಗರ ವಾಸ್ತವ ಗಂಧಿಯಾದ ಮಣ್ಣಿನ ತುಡಿತಗಳಿಗೂ ಇರುವ ಭೇದವನ್ನೇ ಬೆಟ್ಟದಷ್ಟು ಮಾಡಿ ದುಡುಕಿನ ತೀರ್ಮಾನಗಳನ್ನು ಹೇಳಿಬಿಡುವುದು ಸುಲಭ. ಆದರೆ ಕಾನೂರನ್ನು ಆವರಿಸಿರುವ ಭವ್ಯಗಿರಿವನಗಳ ಹಿನ್ನೆಲೆಯ ಚೂರು ಪರಿಚಯವಾಗಬೇಕಾದರೂ, ಅದರ ವಿಭಾವನೆಯ ಆಳ ಅಗಲಗಳಿಗೆ ತಕ್ಕಂತೆ ಭಾಷೆಯೂ ಭಾವುಕವಾಗಬೇಕಾಗುತ್ತದೆ ಸಾಲಂಕಾರಿಕ ವರ್ಣನೆಗಳಿಂದ ದಟ್ಟೈಸಬೇಕಾಗುತ್ತದೆ ಎಂಬ ಸರಳ ಸತ್ಯ ಹೊಳೆಯದಿದ್ದರೆ ತಪ್ಪು ನಮ್ಮದೇ. 'ಕಾನೂರು ಹೆಗ್ಗಡತಿ'ಯ ವಿವರಣಾತ್ಮಕ ಭಾಷೆ ತನ್ಮಯ ಗುಣವುಳ್ಳದ್ದು, ಅದು ಕವಿ ಜಾಯಮಾನವಿರುವವನಿಗೆ ಸಿದ್ಧಿಸುವ ಭಾಷೆ, ಪರ್ವತಾರಣ್ಯಗಳ ಮೋಹಕತೆ ಭೀಷಣತೆಗಳನ್ನು ಉತ್ಕಟವಾಗಿ ಅನುಭಿಸಿದ ಮನಸ್ಸು ಭಾವಾವೇಗದಿಂದ ಹೊಮ್ಮಿಸಿದ ಭಾಷೆ.

'ಮಲೆಗಳಲ್ಲಿ ಮದುಮಗಳು'ವಿನ ಭಾಷೆ ವಿವರಗಳನ್ನೂ ಒಳಗೊಂಡಿದ್ದರೂ ಬಹುತೇಕ ನಿಲಾವೇಶತೆಯ ವಾಸ್ತವಾನುಸಾರಿಯಾದ ಭಾಷೆ. ತಾರುಣ್ಯದ ಹಾಗೂ ಅರವತ್ತರ ಕುವೆಂಪು ಅವರ ದೃಷ್ಟಿಧೋರಣೆಗಳಲ್ಲಿನ ಅಂತರ ಈ ಎರಡು ಕಾದಂಬರಿಗಳ ನಿರೂಪಣಾತ್ಮಕ ಭಾಷೆಯ ಅಂತರದಲ್ಲಿ ವ್ಯಕ್ತವಾಗಬಹುದು. 'ಕಾನೂರು ಹೆಗ್ಗಡತಿ'ಯಲ್ಲಿ ಮುಖ್ಯವಾಗಿ ಒಂದು ಮನೆಯ ಸುತ್ತ ಕತೆ ಕೇಂದ್ರಿತವಾಗಿ ಸುತ್ತಮುತ್ತಲಿನ ಆವರಣವನ್ನು ವಿವರಿಸುವುದಕ್ಕೆ ಆಸ್ಪದ ಹೆಚ್ಚು.

'ಮಲೆಗಳಲ್ಲಿ ಮದುಮಗಳು'ವಿನಲ್ಲಿ ಯಾವ ಒಂದು ಮನೆಯೇ ಆಗಲಿ, ಮನೆತನವೇ ಆಗಲಿ ಕೇಂದ್ರವಾಗುವುದಿಲ್ಲ. ಬಗೆ ಬಗೆಯ ಪಾತ್ರಗಳನ್ನು, ಕಳೆದ ಶತಮಾನದ ಮಧ್ಯಭಾಗದಿಂದ ಕೊನೆಯತನಕ ಮಲೆನಾಡಿನಲ್ಲಿ ನಡೆಯುವ ಮತೀಯ ಪರಿವರ್ತನೆ, ದೀನದಲಿತರ ಜೀವನ ರೀತಿ, ಸಾಮಾಜಿಕ ಸ್ಥಾನಮಾನ, ಶೋಷಣೆ

---

೧. ಕುವೆಂಪು ಕಾದಂಬರಿಗಳಲ್ಲಿ ಪ್ರಕೃತಿ ಮತ್ತು ಸಂಸ್ಕೃತಿ, ಜಿ.ಎಸ್.ಅಮೂರ, ಕುವೆಂಪು ಕಾದಂಬರಿಗಳು (ಸಂ) ಗುರುಪಾದ ಮರಿಗುದ್ದಿ, ಬೆಂಗಳೂರು, ೨೦೦೪, ಪು. ೨೨೫.

ಇಂಥವೇ ಹಲವು ಹನ್ನೊಂದು ವಿದ್ಯಾಮಾನಗಳನ್ನು ದಟ್ಟವಾಗಿ ನೀಡುವ ಆಶಯ ಕುವೆಂಪು ಅವರಿಗೆ ಇದ್ದಂತಿದೆ.

'ಮಲೆಗಳಲ್ಲಿ ಮದುಮಗಳು' ಮಲೆನಾಡಿನ ಗೌಡರ ಜೀವನ ವಿಧಾನ. ಅವರ ಮೂಢನಂಬಿಕೆಗಳು, ಟೊಳ್ಳು ಪ್ರತಿಷ್ಠೆಗಳು, ದರ್ಪ-ದಬ್ಬಾಳಿಕೆಗಳು, ಮೃಗೀಯವೋ ಎನ್ನಿಸುವಂತಹ ಪ್ರಣಯ ಸಾಹಸಗಳು, ಅವರ ಹೆಂಗಸರ ಅಸ್ವತಂತ್ರ ಬಾಳು ಹಾಗೂ ಮುಗ್ಧತೆ, ಆ ಗೌಡರ ಹೊಲ-ಗದ್ದೆಗಳಲ್ಲಿ ದುಡಿಯುವ ಹಳೇ ಪೈಕದವರು, ಹೊಲೆಯರು, ದೀವರು, ಬಿಲ್ಲವರು ಮುಂತಾದವರ ವಿಶಿಷ್ಟ ರೀತಿ-ರಿವಾಜುಗಳು, ಇವರನ್ನು ನಂಬಿ ಬದುಕುವ ಮತ್ತು ಶೋಷಿಸಿ ಬದುಕುವ ಬ್ರಾಹ್ಮಣರು, ಮುಸ್ಲಿಮರು, ಹೊಸ ವಿಚಾರಗಳ ನವನಾಗರಿಕತೆಯ ಪ್ರಸಾರದ ಹೆಸರಿನಲ್ಲಿ ಮತಾಂತರ ಕಾರ್ಯದಲ್ಲಿ ನಿರತರಾಗಿರುವ ಪಾದ್ರಿಗಳು, ಕಾಡಿನ ನಾಡಿನ ದಟ್ಟವಾದ ಅನಿವಾರ್ಯ ಸಂಗಿಯಾದ ಚಿತ್ರಣ ಹೀಗೆ ಹಲವು ಹತ್ತು ರೀತಿಯಲ್ಲಿ ಬದುಕು ಅನಾವರಣಗೊಂಡಿದೆ ಇಲ್ಲಿ.

ಮಲೆನಾಡಿನ ಜನತೆಗೆ ಬಾಡು ಮತ್ತು ಹೆಂಡ ಅತ್ಯಂತ ಪ್ರಿಯವಾದ ಸೆಳೆತಗಳು, 'ಕಾನೂರು ಹೆಗ್ಗಡತಿ'ಯಲ್ಲಿ ಹೆಂಡ ಮತ್ತು ಬಾಡಿನ ವ್ಯಾಮೋಹದ ಅಲೆಗಳನ್ನು ಕುವೆಂಪು ತಮ್ಮ ಹಾಸ್ಯಭರಿತ ಶೈಲಿಯಲ್ಲಿ ಚಿತ್ರಿಸಿದ್ದಾರೆ. ಕೆಳವರ್ಗದ ದಲಿತರು ಮಾತ್ರವಲ್ಲದೆ ಗೌಡರು ಕೂಡ ಅದರ ಗುಲಾಮರಾಗಿ ವರ್ತಿಸುತ್ತಾರೆ. ಒಕ್ಕಲಿಗರೆಲ್ಲರೂ ಸೇರಿ 'ಇನ್ನು ಮೇಲೆ ಕುಡಿಯಬಾರದು' ಎಂಬ ಠರಾವನ್ನು ತೆಗೆದುಕೊಂಡು, ಒಬ್ಬರಿಗೆ ಕಾಣದ ಹಾಗೆ ಇನ್ನೊಬ್ಬರು ಕುಡಿಯತೊಡಗುವುದು ಮಲೆನಾಡಿನ ಬದುಕಿನಲ್ಲಿ ಅದರ ಹಾಸು ಹೊಕ್ಕನ್ನು ಹೇಳುತ್ತದೆ. ಮೇಲ್ಜಾತಿಯವರು ಅಮಲಿಗಾಗಿ ಕುಡಿದರೆ ಕೆಳಜಾತಿಯವರು ದುಃಖದುಮ್ಮಾನಗಳನ್ನು ಮರೆಯಲು ಕುಡಿದು, ಆರ್ಥಿಕವಾಗಿ ಅಧೋಗತಿಗಿಳಿಯುತ್ತಾರೆ. ಮಲೆನಾಡಿನಲ್ಲಿ 'ಕಳ್ಳು' ಕುಡಿಯುವುದರಲ್ಲಿ ಲಿಂಗಭೇದವಿಲ್ಲ. ಹೂವಯ್ಯನ ತಾಯಿ ನಾಗಮ್ಮ ಕೂಡ ಮಗನಿಗೆ ಕಾಣದ ಹಾಗೆ ಕಳ್ಳು ತರಿಸಿ ಕುಡಿಯುತ್ತಾರೆ.

ಕಳ್ಳಿನಷ್ಟೇ ಆಕರ್ಷಕವಾದ ಮತ್ತೊಂದು ತಿನಿಸು ಬಾಡು. ಬೇಟೆಯ ಮೂಲ ಉದ್ದೇಶವೇ ಬಾಡು. ಅನಂತರದಲ್ಲಿ ಸಂತೋಷ ಸಾಹಸ. ಮಲೆನಾಡಿನ ಜನರಿಗೆ ಬಾಡಿನ ಹೆಸರು ಕೇಳಿದರೆ ಮೈರೋಮಾಂಚನಗೊಂಡು ಹೊಸ ಚೈತನ್ಯ ಹರಿದಂತಾಗುತ್ತ ದೆಂಬುದನ್ನು ಕುವೆಂಪು ಹಿಡಿದಿರಿಸಿದ್ದಾರೆ. ಸಾಕಿದ್ದ ಊರು ಹಂದಿಯನ್ನು ಅಡ್ಡಕಟ್ಟಿ ಹೊರುವುದಕ್ಕಾಗಿ ಇಬ್ಬರು ಹೊಲೆಯರನ್ನು ಬರಹೇಳಿದ್ದರು ಸುಬ್ಬಣ್ಣ ಹೆಗ್ಗಡೆ. ಆದರೆ ಹೂವಿ ಹೇಳಿದ ರೀತಿಯಲ್ಲಿ, ಯಾರೋ ಕಾಡು ಹಂದಿ ಷಿಕಾರಿ ಮಾಡಿದ್ದಾರೆ. ಅದರ

ಹಸಿಗೆಗೆ ಬರಬೇಕಂತೆ ಎಂಬರ್ಥ ಸ್ಫುರಿಸಿತ್ತು. ಆದರೆ ಆ ಸುಳ್ಳು ಅರ್ಥದಲ್ಲಿ ಎಂತಹ ಮಂತ್ರಶಕ್ತಿ ಮೈದೋರಿತ್ತು ಎಂದರೆ, ಹಂದಿ ಮತ್ತು ಹಸಿಗೆ ಎಂಬ ಮಾತು ಬಿಡಾರದಿಂದ ಬಿಡಾರಕ್ಕೆ ಮಿಂಚಿನ ವೇಗದಿಂದ ಮುಟ್ಟಿದ್ದೇ ತಡ ಮುಚ್ಚಿದ ತಟ್ಟಿಬಾಗಿಲುಗಳು ಸರಸರನೆ ಒಂದಾದ ಮೇಲೊಂದರಂತೆ ತೆರೆದುಕೊಂಡವು. ಬೆಟ್ಟಳ್ಳಿಗೆ ಹೋಗಬೇಕೆಂದಿದ್ದ ಮಂಜ ಪುಸಕ್ಕನೆ ಕೆಲಸದ ಕತ್ತಿಯನ್ನು ಸೊಂಟಕ್ಕೆ ಸಿಕ್ಕಿಸಿಕೊಳ್ಳುತ್ತಾ ಹಾರಿ ಬಂದನು. ಇಲಿ, ಅಳಿಲುಗಳನ್ನು ಅರ್ಧಂಬರ್ಧ ಸುಟ್ಟಂತೆಯೇ ಬುಟ್ಟಿಯ ಅಡಿ ಮುಚ್ಚಿಟ್ಟು, ಬೈರ ಹೊರಕ್ಕೆ ನೆಗೆದನು, ಸಿದ್ದ, ಕರಿಸಿದ್ದ, ಬಚ್ಚ, ಸಣ್ಣತಿಮ್ಮ, ಪುಟ್ಟ ಅಂಗಳವೆಲ್ಲ ಆಳುಗಳಿಂದ ತುಂಬಿ ಹೋದಂತಾಯಿತು.[೧] ಬಾಡು ತಿನ್ನುವುದು ಸಾರ್ವತ್ರಿಕವಾದ ಸಂಗತಿಯಾದರು ಮಲೆನಾಡಿನಲ್ಲಿ ಅದು ಬೇಟೆಯ ಜೊತೆ ನೆಂಟು ಹಾಕಿಕೊಂಡು ಬರುವುದು ಮುಖ್ಯವಾಗುತ್ತದೆ.

ಪ್ರತಿ ದಿನವೂ ಪ್ರಕೃತಿಯ ತೊಟ್ಟಿಲಲ್ಲಿ ಬದುಕಿರಬೇಕಾದ ಮನುಷ್ಯನ ಕಥೆಯ ವಿಭಿನ್ನ ಮಗ್ಗುಲುಗಳನ್ನು ಕುವೆಂಪು ಕಾದಂಬರಿಗಳಲ್ಲಿ ನಾವು ನೋಡುತ್ತೇವೆ. ಪ್ರಕೃತಿಯ ಒಲವು ಕರುಣೆ ಸಮೃದ್ಧಿಗಳಲ್ಲಿ ತಮ್ಮ ಸುಖ ಸಂತಸಗಳನ್ನು ಅದರ ಭೀಕರತೆ ಕ್ರೌರ್ಯ ವಿಷಮತೆಗಳಲ್ಲಿ ಕಷ್ಟ ಕಾರ್ಪಣ್ಯ, ನೋವುಗಳನ್ನು ಅನುಭವಿಸುವ ಜನವರ್ಗದ ಕಥೆ ಇಲ್ಲಿದೆ. ಇಲ್ಲಿಯ ಜನರು ತಲೆಮಾರುಗಳಿಂದ ಇಂತಹ ಸನ್ನಿವೇಶದಲ್ಲಿ ಜೀವಿಸುತ್ತ ತಮ್ಮ ಸಾಂಸ್ಕೃತಿಕ ಅಸ್ತಿತ್ವವನ್ನು ಕಾಪಾಡಿಕೊಂಡು ಬಂದಿದ್ದಾರೆ. ಮನುಷ್ಯನು ಪರಿಸರವನ್ನು, ಪರಿಸರ ಮನುಷ್ಯನನ್ನು ಪರಸ್ಪರ ಪ್ರಭಾವಿಸುತ್ತ ಬಂದಿರುವುದುಂಟು.

ಕಾಡಿನಲ್ಲಿಯ ಬದುಕೆಂದರೆ ಕಾಡನ್ನು ಅವಲಂಬಿಸಿದ ಬದುಕು. ಜನರ ಭೌತಿಕ ಸಂಗತಿಗಳು ಎಂದರೆ ದುಡಿಮೆ ಉತ್ಪತ್ತಿ, ಹಂಚಿಕೆ, ಉದ್ಯೋಗ, ಹವ್ಯಾಸಗಳೆಲ್ಲ, ಪ್ರಕೃತಿಯ ಸಂಬಂಧವನ್ನು ಪಡೆದುಕೊಂಡಿವೆ. ಜನರು ಬೆಳೆಯುತ್ತಿದ್ದ ಭತ್ತ, ಅಡಿಕೆ, ಬಾಳೆ, ತೆಂಗುಗಳೆಲ್ಲ ಗಾಳಿ, ಮಳೆ, ನೀರು, ನದಿಗಳನ್ನು ಸಹಜವಾಗಿ ಅವಲಂಬಿಸಿವೆ. 'ಆರುಕಟ್ಟುವ' ಮೂಲಕ ಮೊದಲಾಗುವ ಕೃಷಿಯ ಹಲವು ಕಾರ್ಯಗಳು 'ಕೊಯ್ಲು' ಸಮಯದವರೆಗೆ ನಿರಂತರವಾಗಿ ಪ್ರಕೃತಿಯ ಮಡಿಲಲ್ಲಿ ನಡೆಯುತ್ತವೆ. "ಮನೆ ಮನೆಗಳಲ್ಲಿಯೂ ಹಳ್ಳಿಯ ಜನರು ಗದ್ದೆಯ ಕೆಲಸಕ್ಕೆ ಶುರುಮಾಡಿದ್ದಾರೆ. ಆರು ಕಟ್ಟಿದ್ದಾರೆ. ಆಗೋಡಿ ಮಾಡುತ್ತಾರೆ, ಹತ್ತು ಮೀನು ಕಡಿಯುತ್ತಾರೆ, ಅಟ್ಟದ ಮೇಲಿಂದ ಗೊರಬುಗಳೆಲ್ಲ ಹೆಣ್ಣಾಳುಗಳ ತಲೆಗೇರಿ ಸಂಚರಿಸುತ್ತಿವೆ. ಹಾಸಿಗೆಯಲ್ಲಿಯೂ ಸಂದಿ ಮೂಲೆಗಳಲ್ಲಿಯೂ ಇದ್ದ ಕಂಬಳಿ ಕೊಪ್ಪೆಗಳೆಲ್ಲಾ ಗಂಡಾಳುಗಳನ್ನು ತಲೆಗೇರಿ

---

೧. ಕುವೆಂಪು ಮಲೆಗಳಲ್ಲಿ ಮದುಮಗಳು, ಉದಯರವಿ ಪ್ರಕಾಶನ, ಮೈಸೂರು, ೨೦೧೦, ಪು. ೯೭.

ದುಡಿದಾಡುತ್ತಿವೆ. ಎತ್ತಿನ ಹಟ್ಟಿಯ ಉಳಿಮೆಯ ಕೆಲಸದ ಎತ್ತುಗಳಿಗೆಲ್ಲ ರಜಾ ಕಾಲ ಮುಗಿದು ಇಸ್ಕೂಲು ಪ್ರಾರಂಭವಾದಂತಿದೆ."[೧]

ಬೇಟೆಯು ಕಾಡಿಗೆ ನೇರವಾಗಿ ಸಂಬಂಧಪಡುತ್ತದೆ. ಅದು ಉದ್ಯೋಗವಾಗಿ ಅರೆ ಉದ್ಯೋಗವಾಗಿ ಹವ್ಯಾಸವಾಗಿ ಕಾಣಿಸುತ್ತದೆ. ಕಾಡು, ಕಾಡಿನ ನಡುವಿನ ನದಿ ಹಳ್ಳಹೊಂಡಗಳು ಈ ಜನರಿಗೆ ಬೇಟೆಯ ಜೀವಿಗಳನ್ನು ಒದಗಿಸುತ್ತವೆ. ಹೊರಜಗತ್ತನ್ನು ಅಷ್ಟಾಗಿ ಕಾಣಲಾರದ ಗುತ್ತಿ ಪುಟ್ಟಣ್ಣರಂತಹ ಅವಿದ್ಯಾವಂತರು, ಚಿನ್ನಯ್ಯ ಹೂವಯ್ಯರಂತಹ ವಿದ್ಯಾವಂತರು ಬೇಟೆಯಲ್ಲಿ ತೊಡಗುವುದು ಸಹಜವಾಗಿದೆ. ಆಧುನಿಕವಾಗಿದ್ದ ಮುತ್ತಳ್ಳಿಯ ಚಿನ್ನಯ್ಯ ಬೈಲುಕೆರೆಯ ನೀರಿನಲ್ಲಿ ಮೀನು ಬೇಟೆ ನಡೆಸುವನು. ಆತ ನಂಜನೊಂದಿಗೆ ಆ ಕೆರೆಯ ದಡದ ಮೇಲಿರುವ ಮರದಲ್ಲಿ' ಮರಸು ಕೂತು ಮೀನುಗಳನ್ನು ಕಾಯತೊಡಗುವನು. ಇಲ್ಲಿಯ ವಿವರಣೆಯಲ್ಲಿ ಬಂದಿರುವ ಪರಿಸರದ ಸೂಕ್ಷ್ಮಗಳನ್ನು ಗಮನಿಸಬಹುದು. "ಗಂಟೆ ಒಂಬತ್ತಾಗಿದ್ದರೂ ಬೇಸಗೆಯ ಬಿಸಿಲು ಬಿರುಸಾಗಿದ್ದರೂ ಆ ಕಾಡಿನ ಹಸುರಿನಲ್ಲಿ ಎಲ್ಲವೂ ತಂಪಾಗಿತ್ತು. ಮರಗಳಿಂದ ತೂರಿ ಬರುತ್ತಿದ್ದ ಬಿಸಿಲಿನ ಕೋಲುಗಳು ನಿಸ್ತರಂಗವಾಗಿ ಕನ್ನಡಿಯಂತೆ ನೀಲಾಕಾಶವನ್ನು ಬೆಳ್ಮುಗಿಲುಗಳನ್ನು ಪ್ರತಿಬಿಂಬಿಸುತ್ತಿದ್ದ ಕೆರೆಯ ಸಲೀಲವಕ್ಷದಲ್ಲಿ ನಲಿದಾಡುತ್ತಿದ್ದವು. ಕೆರೆಯ ತುಂಬ ಪಾಚಿ ಬೆಳೆದಿತ್ತು. ಆದರೆ ಆಳವಾಗಿದ್ದ ಕೆಲವು ಭಾಗಗಳಲ್ಲಿ ಪಾಚಿ ತಲೆಯೆತ್ತಿ ಕಾಣುತ್ತಿರಲಿಲ್ಲವಾಗಿ ನಿರ್ಮಲವಾಗಿದ್ದಂತೆ ತೋರುತ್ತಿತ್ತು. ಮೂಲೆ ಮೂಲೆಗಳಲ್ಲಿ ಕೆಸು, ಜೊಂಡ, ಆವಲ ಮೊದಲಾದ ಜಲಸಸ್ಯಗಳು ಬೆಳೆದು ಅರಣ್ಯವಾಗಿತ್ತು. ಅವುಗಳ ಮಧ್ಯೆ ಹುಂಡು ಕೋಳಿಗಳೂ ಬೆಚ್ಚಿ ಬೆದರಿ ಚಲಿಸುತ್ತಿದ್ದವು. ಕೆಲವು ಕಪ್ಪೆಗಳು ಆಗಾಗ ವಟಗುಟ್ಟಿ ಹಾರಾಡುತ್ತಿದ್ದವು."[೨]

ಚಿನ್ನಯ್ಯ ಕೂತಿದ್ದ ಗಿಡದ ಕೊಂಬೆಯೊಂದರಲ್ಲಿ ಬಲೆಕಟ್ಟಿದ್ದ ಜೇಡ ಹುಳು ಬೇಟೆಗಾಗಿ ಹೊಂಚುವುದು, ನೀರಿನಲ್ಲಿಯ ಹುಡಿಮೀನುಗಳ ಹಾರಾಟ, ಹಳದಿ ಬಣ್ಣದ ಹಕ್ಕಿಯ ಸಿಳ್ಳೆ ನೀರ ಆಳದಲ್ಲಿ ಆಡುವ ಅವಲು ಮೀನುಗಳು, ಸುತ್ತಲಿನ ಹೆಮ್ಮರಗಳು ಅಲ್ಲಿಯ ಪರಿಸರವನ್ನು ಸಜೀವವಾಗಿ ಕ್ರಿಯಾಶೀಲವಾಗಿ ಮಾಡಿವೆ. ಇದೇ ತೆರನಾಗಿ ಬೇಲರ ಬೈರ ತನ್ನ ಮಗನಾದ ಗಂಗನೊಂದಿಗೆ ಹೊಂಡದಲ್ಲಿ ಮೀನು ಹಿಡಿಯುತ್ತಾನೆ. ಅಲ್ಲಿ ಅವರು ಹೊಂಡದ ನೀರನ್ನೆಲ್ಲ ಎತ್ತಿ ಹೊರಹಾಕಿ ಕೆಸರು ನೀರನ್ನು ಸೋಸಿ ಮೀನು ಹಿಡಿಯುವ 'ಹೊಂಡತೊಣಕು' ವಿಧಾನವನ್ನು ಬಳಸುತ್ತಾರೆ.

---

೧. ಕುವೆಂಪು, ಮಲೆಗಳಲ್ಲಿ ಮದುಮಗಳು, ಉದಯರವಿ ಪ್ರಕಾಶನ, ಮೈಸೂರು, ೨೦೧೦, ಪು. ೫೬೧

೨. ಕುವೆಂಪು, ಕಾನೂರು ಹೆಗ್ಗಡತಿ, ಉದಯರವಿ ಪ್ರಕಾಶನ, ಮೈಸೂರು, ೨೦೧೦, ಪು. ೨೧

ಸುತ್ತಲಿನ ಹಸಿರು ಕಾಡಿನ ನಡುವೆ ಹರಿವ ಹಳ್ಳದ ನೀರಿನಲ್ಲಿ ಮುಕುಂದಯ್ಯ, ಐತ ಆತನ ಹೆಂಡತಿ ಪೀಂಚಲು ಕಪ್ಪೆಗೋಲಿನಿಂದ ಮೀನು ಹಿಡಿಯುವುದಿದೆ. ಆ ಬೇಟೆಯ ಒಂದು ಹಂತದಲ್ಲಿಯ ವರ್ಣನೆಯಿದು:

"ಪಕ್ಕನೆ ಸುತ್ತಲೂ ನಿಶ್ಯಬ್ದವಾದಂತಾಯಿತು. ಕಾಗೆಗಳಂತೆ ಕೋಗಿಲೆಗಳೂ ವಿರಳವಾಗಿದ್ದ ಆ ಕೋಣೂರಿನ ಹಾಡ್ಯದಲ್ಲಿ ಅಪರೂಪಕ್ಕೆಂಬಂತೆ ಕೂಗುತ್ತಿದ್ದ ಒಂದು ಕೋಗಿಲೆಯ ಇಂಚರ ಅಲೆ ಅಲೆಯಾಗಿ ತೇಲಿ ಬರುತ್ತಿತ್ತು. ಒಂದು ಕಾಮಳ್ಳಿಯ ಹಿಂಡು ಅಲೆಯುತ್ತಾ ರೆಕ್ಕೆ ಸದ್ದೂ ಕಿವಿಗೆ ಬರುವಷ್ಟು ಸಮೀಪದಲ್ಲಿ ಹಾರಿ ಹೋಯಿತು. ದೂರದ ತೋಟದ ಮೂಲೆಯಲ್ಲಿ ಮರ ಕಡಿಯುತ್ತಿದ್ದ ಸದ್ದು ಮಂದವಾಗಿ ಬರುತ್ತಿತ್ತು."[೧] ಕಾಡು ಹಿನ್ನೆಲೆಯಲ್ಲಿದೆ ಹಕ್ಕಿಗಳ ನೀರಿನ ಸದ್ದೂ ಇದೆ. ಈ ನಡುವೆ ಅವರು ಏಡಿ ಹಿಡಿದು ಹಾಳೆಕೊಟ್ಟೆಯಲ್ಲಿ ಸಂಗ್ರಹಿಸುತ್ತಿದ್ದಾರೆ.

ಮಲೆನಾಡಿನ ಜೀವನಾಡಿಯಂತಿರುವ ತುಂಗಾನದಿಯ ದಡದ ರಾಮತೀರ್ಥದೆಡೆಯ ಕಲ್ಲು ಸಾರದಿಂದ ಕತೆ ಪ್ರಾರಂಭವಾಗುತ್ತದೆ. ಮೀನಿಗೆ ನೀರೆಂತೊ ಕಾದಂಬರಿಕಾರರಿಗೆ ಹಾಗೂ ನಾಯಕ ಪಾತ್ರವಾದ ಹೂವಯ್ಯನಿಗೆ ನಿಸರ್ಗ ನಿತ್ಯಾಶ್ರಯವಾಗುತ್ತದೆ. ನಿತ್ಯ, ಯಾತ್ರಾಸ್ಥಾನವಾಗುತ್ತದೆ. ಜೀವನ ವಿಕಾಸಕ್ಕೊಂದು ಸ್ಫೂರ್ತಿಯ ಸೆಲೆಯಾಗುತ್ತದೆ. ಬೇಸಗೆಯ ರಜೆಯಲ್ಲಿ ನಗರದಿಂದ ಹೊರಬಿದ್ದು ತುಂಗೆಯ ದಡದಲ್ಲಿ ಕಾಲಿಡುತ್ತಿದ್ದಂತೆ ಕೊಂಬೆಯಿಂದ ಕೊಂಬೆಗೆ ಕುಪ್ಪಳಿಸುತ್ತಿದ್ದ ಹಕ್ಕಿಗಳೂ ನೀಲಾಕಾಶದಲ್ಲಿ ತೇಲುತ್ತಿದ್ದ ಬಿಳಿಯ ಬಣ್ಣದ ಉಣ್ಣೆಯೂ ಮುಗಿಲಾಗಿ ಕಣ್ಣಿಗೆ ಬೀಳಲಾಗಿ ಅವನು ಅಂತರ್ಮುಖಿಯಾಗುತ್ತಾನೆ. ಕೋಗಿಲೆಯ ಕೂಗು ಅವನ ಪಾಲಿಗೆ 'ನನ್ನಂತಾಗು, ನನ್ನಾಂತಾಗು' ಎನ್ನುವಂತಿತ್ತಂತೆ.

ಆಗ ಅದೆ ತಾನೇ ಬೇಸಗೆ ಅತಿಥಿಯಾಗಿ ಮಲೆನಾಡಿಗೆ ಕಾಲಿಟ್ಟಿತ್ತು. ಅದರ ವರ್ಣನೆಯನ್ನು ಓದುತ್ತಿದ್ದರೆ ಸಾಕು, ಬೇಸಗೆಯ ಝಳದಿಂದ ಓದುಗನಿಗೂ ಆಯಾಸವಾದಂತೆ ಅನುಭವವಾಗುತ್ತದೆ. ಬೇಸಗೆಯ ಮಧ್ಯಾಹ್ನದ ಸೂರ್ಯನ ತಪ್ತ ತಾಮ್ರ ಬಿಂಬವು ಕಠೋರ ನಿಷ್ಕಾರಣ್ಯದಿಂದ ಕರೆಯುತ್ತಿದ್ದ ಪ್ರಖರ ಕಿರಣ ವರ್ಷದಲ್ಲಿ ದಟ್ಟವಾಗಿ ಕಾಡು ಬೆಳೆದು ತೆರೆತೆರೆಯಾಗಿ ಹಬ್ಬಿದ್ದ ಮಲೆನಾಡಿನ ಬೆಟ್ಟಗುಡ್ಡಗಳು ಆಯಾಸದಿಂದ ಮೂರ್ಛೆಗೊಂಡಂತೆ ಶ್ಯಾಮಲ ನಿದ್ರಾಸಕ್ತವಾಗಿದ್ದವು. ಧೂಳುಗೆಂಪಿನ ರಸ್ತೆ ಸಹ್ಯಾದ್ರಿಯ ಅರಣ್ಯದೇವಿಯ ಮಹಾಮಸ್ತಕದ ಸುದೀರ್ಘವಾದ ಬೈತಲೆಯ ಸರಳ

೧. ಕರೀಗೌಡ ಬೀಚನಹಳ್ಳಿ (ಡಾ), ಕುವೆಂಪು ಮತ್ತು ದಲಿತ ಸಂವೇದನೆ, ಪು. ೬೬೦, ಅನಿಕೇತನ, ೨೦೦೫.

ವಕ್ರ ನಿಮ್ನೋನ್ನತ ರೇಖಾ ವಿನ್ಯಾಸದಂತೆ ಮೆರೆದಿತ್ತು. ಯಾವುದೊಂದು ಪ್ರಾಣಿಯ ಸಂಚಾರವೂ ಇರಲಿಲ್ಲ. ಆಗಾಗ ನೇರಿಳೆಯ ಪೊದರು ಮರಗಳಲ್ಲಿ ಪಿಕಳಾರ ಹಕ್ಕಿಗಳು ಮಾತ್ರ ಚಿಮ್ಮುತ್ತಿದ್ದುದು ಕಾಣಬರುತ್ತಿತ್ತು. ಆ ಮಟಮಟ ಮಧ್ಯಾಹ್ನದಲ್ಲಿ ಅವುಗಳ ಆ ಕಾರ್ಯವೂ ಧೂರ್ತತನವಲ್ಲದೆ ಲೀಲೆಯಾಗಿರಲಿಲ್ಲ. ಅವು ಕೂಗುತ್ತಿದ್ದುವೋ ಏನೋ? ಆದರೆ ಕೇಳಿಸುತ್ತಿರಲಿಲ್ಲ. ಆ ಹಗಲು, ಆ ಬಿಸಿಲು ಆ ಕಾಡಿನ ಹಸುರು ಶಾಂತಿ, ಆ ನಿರ್ಜನತೆ, ಆ ಗಾಡಿಯ ಡೋಲಾಯಮಾನತೆ, ಆ ಘಂಟಾ ನಾದದ ಜೋಗುಳದಲಿ ಇವುಗಳಲ್ಲಿ, ಗಾಡಿಯೊಳಗಿದ್ದ ಹಸಿದು ಆಯಾಸಗೊಂಡಿದ್ದ ಜನಗಳು ಮಾತು ಬಿಟ್ಟು ತೂಕಡಿಸಲಾರಂಭಿಸಿದ್ದರು. ನಿಂಗನು ಕೂಡ ಅರೆನಿದ್ದೆಯಲ್ಲಿದ್ದನು. ಲಚ್ಚನಿಗೆ ಬಾಯಾರಿಕೆಯಾಗಿ ನೀರು ಕಂಡರೆ ಸಾಕು ಎನ್ನುವಷ್ಟಾಗಿತ್ತು. ಹಾದಿಯ ಪಕ್ಕದ ಕೆರೆಯ ಕಡೆಗೆ ಎತ್ತುಗಳು ಎಳೆಯಲಾಗಿ ಗಾಡಿ ಉರುಳುತ್ತದೆ. ಹೂವಯ್ಯನ ಬೆನ್ನು ಮೂಳೆ ಟ್ರಂಕಿಗೆ ಬಡಿದು ಉಳುಕಿ ನೋವಾಗುತ್ತದೆ.

ಬೇಸಗೆಯ ಬಿಸಿಲಿನ ಅನುಭವವನ್ನು ಪಡೆದವರಿಗೆ ಈ ವರ್ಣನೆಯ ವಾಸ್ತವ ಅನುಭವ ಮನದಟ್ಟಾಗದಿರದು. ಕತೆಯ ಚಾಲನೆಗೆ ಈ ವರ್ಣನೆ ಅನಿವಾರ್ಯವಾಗಿ ರಲಾಗಿ ಅದನ್ನು ಪ್ರಮುಖ ಘಟನೆಯೆಂದೇ ಗ್ರಹಿಸಬಹುದಾಗುತ್ತದೆ. ಬೇಸಗೆಯ ರಣ ಬಿಸಿಲಿನಿಂದಾಗಿ ಗಾಡಿ ಉರುಳುತ್ತಿದೆ, ಹೂವಯ್ಯನ ಬೆನ್ನುಮೂಳೆ ಉಳುಕುತ್ತದೆ, ಮುತ್ತಳ್ಳಿಯಲ್ಲವನು ವಿಶ್ರಾಂತಿ ಪಡೆಯಬೇಕಾಗುತ್ತದೆ. ಆ ವಿಶ್ರಾಂತಿ ಕಾಲದಲ್ಲಿ ಸೀತೆ ಹೂವಯ್ಯನವರ ಹೃದಯಗಳು ಒಂದಾಗುತ್ತವೆ. ಈ ಘಟನೆಗಳ ಛಾಯೆ ಕಾದಂಬರಿಯ ಇತರ ಪಾತ್ರಗಳ ಮೇಲೆ ಮಾತ್ರವಲ್ಲ ಕೊನೆಯತನಕ ಅದರ ಬೆಳವಣಿಗೆಯ ಮೇಲೆ ಪರಿಣಾಮ ಬೀರುತ್ತದೆ. ಮಲೆನಾಡ ಜೀವನದ ಒಂದು ಅವಿಭಾಜ್ಯ ಸಂಗತಿಯಂತೆ ಮತ್ತೊಂದೆಡೆ ವೈಶಾಖದ ಬೇಗೆ ಭಯಂಕರ ರೀತಿಯಲ್ಲಿ ಅಟ್ಟಹಾಸಗೆಯ್ಯುತ್ತದೆ.

ಮಲೆನಾಡೆಂದರೆ ಮಳೆ, ಅದರ ವಿಶ್ವರೂಪವನ್ನು ಅಲ್ಲಿಯಂತೆ ಬೇರೆಲ್ಲಿಯೂ ಕಾಣಲಾಗದು. ಹೂಮಳೆ ಸೋನೆಯಳೆಯಿಂದ ಹಿಡಿದು ಭೋರ್‌ಮಳೆ ಹೊಯ್ಮಳೆ ದಡಿಗಮಳೆಯ ತನಕ ಐದಾರು ತಿಂಗಳು ರಪರಪನೆ ಸುರಿಯುತ್ತದೆ. ಒಮ್ಮೊಮ್ಮೆ ಅದು ಪ್ರಳಯ ಸ್ವರೂಪವನ್ನು ಪಡೆದರೂ, ಅದಿಲ್ಲದೆ ಮಲೆನಾಡಿನ ಬದುಕು ಅಸಹನೀಯವಾಗುತ್ತದೆ. ಜೀವನ ಸಮಸ್ತಕ್ಕೂ ಅದೇ ಜೀವಸತ್ವವಲ್ಲವೆ? ನಿಸರ್ಗದ ವೈಭವಕ್ಕೂ ಅದೇ ಪ್ರಮಾಣ. ಪ್ರಕೃತಿ ವ್ಯಾಪಾರಗಳು ಮಾತ್ರವಲ್ಲ, ಜನಜೀವನ ಕ್ರಿಯಾಶೀಲವಾಗುವುದೇ ಮಳೆಗಾಲದಲ್ಲಿ. ಗದ್ದೆ ತೋಟಗಳ ಕೆಲಸದ ಜೊತೆಗೆ ಮೀನು ಬೇಟೆಯೂ ಇರುತ್ತದೆ. ಬಿರುಮಳೆಯಲ್ಲಿ ಮಿಂದು ಮಿಂದು ನಾಡೆಲ್ಲ ಹಸುರಾಗಿ

ಚೊಕ್ಕಟವಾಗಿತ್ತು. ಆಕಾಶದ ತುಂಬ ಮೋಡ ಮುಚ್ಚಿಕೊಂಡು ಸೂರ್ಯರಶ್ಮಿಯ ಸುಳಿವು ಅಡಗಿ ಹೋಗಿತ್ತು. ವಾಯುಮಂಡಲವು ನಿರ್ಮಲವಾಗಿತ್ತು. ಬಯಲುಗಳ ಮೇಲೆ ಹಸಿರುಗಂಬಳಿ ಹಾಸಿದಂತೆ ಹುಲ್ಲು ಹಬ್ಬಿ ಬೆಳೆದಿತ್ತು. ಸುತ್ತಲೂ ಮಹಾಪರ್ವದ ದುರ್ಗದ ಗೋಡೆಗಳಂತೆ ಎತ್ತರವಾಗಿ ಎದ್ದು ನಿಂತಿದ್ದ ಬೆಟ್ಟಗಳನ್ನು ಬಿಗಿದಪ್ಪಿದ್ದ ಕಾಡುಗಳ ಸಾಲು ಹಚ್ಚನೆ ಹಸುರಾಗಿ ರಮಣೀಯವಾಗಿತ್ತು. ಗದ್ದೆಗಳಲ್ಲಿ ಅಲ್ಲಲ್ಲಿ ಗುಪ್ಪೆ ಗುಪ್ಪೆಯಾಗಿ ಹಾಕಿದ್ದ ಕರಿಯ ಗೊಬ್ಬರದ ರಾಶಿಗಳಲ್ಲಿ ಉರುಳಿ ಹಕ್ಕಿಗಳು ನಾನಾ ವಿಧವಾಗಿ ಕೆರೆಯುತ್ತ ಹುಳು ಬೇಟೆಯಲ್ಲಿ ಮಗ್ನವಾಗಿದ್ದವು. ಅಲ್ಲಲ್ಲಿ ಬಿಳಿಯ ಕುಕ್ಕಗಳೂ ತಮ್ಮ ನೀಳವಾದ ಬಿಳಿಯ ಕೊರಳುಗಳನ್ನು ಎತ್ತಿಕೊಂಡು ಧ್ಯಾನಮಾಡುವಂತೆ ಕುಳಿತಿದ್ದವು.

ಹೂವಯ್ಯನೂ ತಾನು ಕೈಗೊಂಡ ಹೊಸ ಕಸಬಿನಲ್ಲಿ ಮಗ್ನನಾಗಿದ್ದರೂ ತಾನು ಕಾಲೇಜಿನಲ್ಲಿ ಉಪನ್ಯಾಸಮಂದಿರದ ಗ್ಯಾಲರಿಯಲ್ಲಿ ಕುಳಿತು ಅಧ್ಯಾಪಕರ ಮಾತುಗಳನ್ನು ಕೇಳುತ್ತಿರುವ ದೃಶ್ಯವನ್ನು ಆಗ ತಾನು ಗೈಯುತ್ತಿದ್ದ ದೃಶ್ಯದೊಡನೆ ಹೋಲಿಸಿಕೊಂಡು ಮುಗುಳುನಗೆ ನಕ್ಕನು. ಭಗವಂತನ ಕರುಣೆಯೇ ಅವತರಿಸಿದಂತೆ ಮುಂಗಾರು ಮಳೆ ವ್ಯೋಮದಿಂದಿಳಿಯಲಾಗಿ ಪುನಶ್ಚೇತನಗೊಂಡ ಪ್ರಕೃತಿಯ ಸೌಂದರ್ಯ ಮಯೂರ ನರ್ತನದ ಮುಂದೆ ನಾಗರಿಕ ಕಾರ್ಖಾನೆಗಳಂತಿರುವ ವಿದ್ಯಾಸಂಸ್ಥೆಗಳಲ್ಲಿ ನಡೆಯುವ ವ್ಯವಹಾರಗಳು ಹೂವಯ್ಯನಂಥ ನಿಸರ್ಗೋಪಾಸಕನಿಗೆ ಶುಷ್ಕವಾಗಿ ಕಂಡಿರಬೇಕು.

ಸಹಸ್ರ ಸಹಸ್ರ ವರ್ಷಗಳಿಂದ ಮಲೆನಾಡಿನಲ್ಲಿ ಮಳೆ ಧಾರಾಕಾರವಾಗಿ ಸುರಿಯುತ್ತಿದೆ. ಧಗೆ ಕಡಿಮೆಯಾಗುತ್ತದೆಂಬ, ಬೆಳೆಗೆ ಅನಿವಾರ್ಯವೆಂಬ ಕಾರಣದಿಂದ ಜನ ಅದನ್ನು ಸ್ವಾಗತಿಸುತ್ತಾರೆ. ಆದರದು ಕುವೆಂಪು ಅವರಿಗಾದಂತೆ ಬಹುಜನರ ಅನುಭವದ ಭಾಗವಾಗಿಲ್ಲ. ಸುಂದರಾಭಿವ್ಯಕ್ತಿಯ ವಸ್ತುವಲ್ಲ. ವೈಶಾಖಾನಂತರದ ವರ್ಷಾಗಮನ ಕ್ರಮ ಕ್ರಮೇಣ ವರ್ಣನೆ ಕಾದಂಬರಿಕಾರರ ಸೂಕ್ಷ್ಮ ವೀಕ್ಷಣಾ ಸಾಮರ್ಥ್ಯವನ್ನೂ ಅಭಿವ್ಯಕ್ತಿ ಕೌಶಲ್ಯವನ್ನೂ ಪ್ರಕಾಶಗೊಳಿಸುವಂತೆ, ವಾಚಕರನ್ನು ಕಲ್ಪನಾ ಸ್ವರ್ಗಕ್ಕೇರಿಸುತ್ತದೆ. 'ಸ್ವಲ್ಪ ಹೊತ್ತಿನಲ್ಲಿಯೇ ನಿಶ್ಚಲವಾಗಿದ್ದ ವಾಯುಮಂಡಲವು ಚಲಿಸತೊಡಗಿತು. ಗಾಳಿ ಬರುಬರುತ್ತ ಬಿರುಸಾಗಿ ಬೀಸತೊಡಗಿತು. ಕುಂಕುಮದಂತೆ ನುಣ್ಣಗಿದ್ದು, ಬೇಸಗೆಯ ಸುಡುಬಿಸಲಿಗೆ ಬೆಂದು ಹಗುರವಾಗಿದ್ದ ರಸ್ತೆಯ ಕೆಮ್ಮಣ್ಣು ಧೂಳಿ ಮುಗಿಲು ಮುಗಿಲಾಗಿ ಮೇಲೆದ್ದು, ಸುಳಿಸುಳಿಯಾಗಿ, ಚಿತ್ರ ವಿಚಿತ್ರ ವಿನ್ಯಾಸ ಭಂಗಿಗಳಿಂದ ಇಕ್ಕೆಲ್ಲದ ದಟ್ಟ ಕಾಡುಗಳ ಹಸುರಿನಲ್ಲಿ ನುಗ್ಗತೊಡಗಿತು. ಗಗನ ಚುಂಬಿಗಳಾದ ವೃಕ್ಷ ಶಿಖರಗಳು ಬಳ್ಳಿಗಳಂತೆ ಬಳುಕಿ ಭಯಂಕರವಾಗಿ ತಲೆದೂಗಿದವು. ನಾಡಿನ ನೀರವತೆ ಭೋರೆಂಬ ಭೀಷಣ ನಾದಕ್ಕೆ ಸೂರೆಹೋಯಿತು. ಬೂರುಗದರಳೆ,

ತರಗೆಲೆ, ಕಸಕಡ್ಡಿ, ಒಂದೆಡೆಯಿಂದ ಮತ್ತೊಂದೆಡೆಗೆ ಹುಚ್ಚು ಹಿಡಿದವರಂತೆ ಹಾರಾಡ ತೊಡಗಿದವು. ಬಿದಿರ ಮೆಳೆಗಳು ತಲೆಗೆದರಿ ಆನೆಗಳಂತೆ ಘೀಳಿಟ್ಟವು. ಒಂದನ್ನೊಂದು ಉಜ್ಜಿದ ಬೊಂಬುಗಳಿಂದ ಒಗೆದ ಆ ಘೀಕೃತಿ ಅರಣ್ಯ ಪಿಶಾಚಿಗಳ ಆರ್ತನಾದದಂತೆ ಭಯಾನಕವಾಯಿತು. ಗಾಡಿಯಲ್ಲಿದ್ದವರಿಗೂ ಒಂದೊಂದು ಸಾರಿ ಪವನ ಹತಿಯಿಂದ ಉಸಿರುಕಟ್ಟಿದಂತಾಗುತ್ತಿತ್ತು.

ನೋಡುತ್ತಿದ್ದಂತೆ ಹಾಗೆಯೇ ನೀಲ ನಿರ್ಮಲರಾಗಿ, ಎಲ್ಲಿಯೋ ದೂರದೂರದಲ್ಲಿ ಒಂದೆಡೆ ಮಾತ್ರ ಸಣ್ಣ ಸಣ್ಣ ಬೆಳ್ಮುಗಿಲುಗಳಿಂದ ಖಚಿತವಾಗಿದ್ದ ಆಕಾಶ ದೇಶವು ಸಜೀವವಾಯಿತು. ಆ ಕರಿಯ ಬಿಳಿಮುಗಿಲು ತೋಳಗಳ ಹಿಂಡಿನ ಬರುವಿಕೆಯನ್ನು ಅರಿತು ಭಯಭ್ರಾಂತವಾಗಿ ಮೇವು ಬಿಟ್ಟು ಓಡುವ ಬಿಳಿಯ ಕಂಬಳಿ ಕುರಿಗಳ ಮಂದೆಯಂತೆ, ದಿಕ್ಕು ದಿಕ್ಕಿಗೆ ಚೆದುರಿ ಬೆದರಿ ಧಾವಿಸಿದವು. ಅವುಗಳಿಗೆ ಬದಲಾಗಿ ಧೂಮ ವರ್ಣದ, ಧೂಮರೂಪದ, ಮಹಾಶಿಲಾ ಖಂಡಗಳಂತೆ ಮೃದು ಕಠಿಣವಾಗಿದ್ದ ಮುಂಗಾರ್ಗಾಲದ ಕರಿಮುಗಿಲ ಸೇನೆ ಧೀರವಾಗಿ, ಗಂಭೀರವಾಗಿ, ಭೀಷಣವಾಗಿ, ವೇಗವಾಗಿ ನಭಸ್ಥಲವನ್ನೆಲ್ಲ ಆಕ್ರಮಿಸಿತು. ಮೊದಮೊದಲು ದೂರದೂರವಾಗಿದ್ದ ಗುಡುಗು ಮಿಂಚು ತುಸು ಹೊತ್ತಿನಲ್ಲಿಯೆ ಭಯಂಕರವಾಗಿ ಬಳಿ ಸಾರಿದುವು. ಗಾಡಿಯ ಹಿಂಭಾಗದಲ್ಲಿ ಕೂತಿದ್ದ ಹೂವಯ್ಯನು ಆ ಸೌಂದರ್ಯ ರೌದ್ರಗಳ ಭೀಷಣ ಭವ್ಯತೆಯನ್ನು ನೋಡಿ ಉನ್ಮನಸ್ಕನಾದನು. ಅವನಲ್ಲಿ ಭಯವೂ ರೋಮಾಂಚನವೂ ಒಂದರೊಡನೊಂದು ಸ್ಪರ್ಧೆ ಹೂಡಿದಂತಿತ್ತು. ಪ್ರಕೃತಿಯ ಆ ಪ್ರಚಂಡ ಶಕ್ತಿಗಳ ತಾಂಡವಲೀಲೆಯಲ್ಲಿ ಮಾನವನ ಮಹದ್ವ್ಯಾಪಾರಗಳು ಕೂಡ ಕ್ಷುದ್ರ ಕ್ಷುದ್ರವಾಗಿ ತೋರತೊಡಗಿದವು. ಆ ಝುಂಝಾವಾಡ ವಿದ್ಯುತ್ ವಜ್ರಗಳಿಗೆ ಮುತ್ತಳ್ಳಿಯ ಗಾಡಿಯೂ ಗಾಡಿಯಲ್ಲಿದ್ದ ಅಸಂಸ್ಕೃತ ಅರ್ಧ ಸಂಸ್ಕೃತ ಸುಸಂಸ್ಕೃತರೂ ಅಲ್ಲಿ ಚಿಮ್ಮಿ ತೆಗೆಯುತ್ತಿದ್ದ ತರಗೆಲೆಗಳಿಗಿಂತಲೂ ಹೆಚ್ಚೇನೂ ಗಣ್ಯವಾಗಿದ್ದಂತೆ ತೋರುತ್ತಿರಲಿಲ್ಲ"[೧]

ಮಳೆ ಮಲೆನಾಡಿನ ಜೀವನದ ಅವಿಭಾಜ್ಯ ಅಂಗ. ಪ್ರಕೃತಿ ರೌದ್ರವತೆಯೆದುರಿನ ಮಾನವನ ಅಲ್ಪತೆ, ವರ್ಷಾಕಾಲದ ಸೌಂದರ್ಯ ರೌದ್ರಗಳ ಭೀಷಣ ಭವ್ಯತೆ, ಇವು ಈ ವರ್ಣನೆಯಿಂದ ವ್ಯಕ್ತವಾಗುವ ಸಂಗತಿಗಳು. ಹೂವಯ್ಯನಂಥ ರಸಿಕನಿಗೆ ಮುಂಗಾರಿನ ಆರ್ಭಟ ಭಯಾನಕವಾದರೂ ರೋಮಾಂಚಕರವಾಗಿರುತ್ತದೆ. ಸಾಮಾನ್ಯ ಭೀರುವಿಗೆ ಭೀಕರ ಪಿಶಾಚಿಯಾಗುತ್ತದೆ. ಸಾಯಂಕಾಲದ ಮಳೆಯಿಂದಾಗಿ ಮಾರನೆಯ

---

೧. ಕುವೆಂಪು, ಕಾನೂರು ಹೆಗ್ಗಡತಿ, ಪು. ೨೪೦, ಉದಯ ಪ್ರಕಾಶನ, ೨೦೧೦.

ಪ್ರಾತಃಕಾಲದ ಪ್ರಕೃತಿ ದೃಶ್ಯ ಸ್ವರ್ಗೀಯ ರಮಣೀಯವಾಗಿತ್ತೆಂಬುದೂ ಮುಂದಿನ ವರ್ಣನೆಯಿಂದ ವೇದ್ಯವಾಗುತ್ತದೆ. ವಾಯುಮಂಡಲವು ನಿರ್ಮಲವಾಗಿತ್ತು. ಆಕಾಶವೂ ಪ್ರಸನ್ನವಾಗಿತ್ತು. ಮಳೆಯಲ್ಲಿ ಮಿಂದ ಮರಗಿಡ ಬಳ್ಳಿಗಳ ಹಸುರೆಲೆಗಳಿಗೆ ಮತ್ತಿನಿತು ಹಸುರೇರಿ ಹಾಡುಗಳೆಲ್ಲ ನಳನಳಿಸಿ ನಗುವಂತಿದ್ದವು. ನೆಲದ ಹುಲ್ಲಿನ ಮೇಲೆಯೂ, ಬಿದಿರು ಮೆಳೆಗಳಲ್ಲಿಯೂ ಬಳ್ಳಿಯ ಕುಡಿಕುಡಿಗಳಲ್ಲಿಯೂ, ಎಲೆಗಳ ಮರಿಮರಿಗಳಲ್ಲಿಯೂ ಜೇಡರ ಬಲೆಗಳಲ್ಲಿಯೂ ನೂರು, ಸಾವಿರ ಕೋಟಿ ಕೋಟಿ ಹನಿಗಳು ಮುನ್ನೇಸರ ಹೊಂಬಿಸಿಲಲ್ಲಿ ಬಣ್ಣ ಬಣ್ಣದ ಸಣ್ಣ ಸಣ್ಣ ರನ್ನ ಸೊಡರುಗಳಂತೆ ಕಿಡಿಕಿಡಿಯಾಗಿ, ಉರಿಉರಿಯಾಗಿ, ಮೆಲ್ಲೆಲರಲ್ಲಿ ಮಿಣುಕಿ ಮಿಣುಕಿ ಮಿರುಗುತ್ತಿದ್ದುವು. ಗಿಣಿ, ಪಿಕಳಾರ, ಕಾಮಾಳ್ಳಿ, ಕಾಜಾಣ, ಮಿಂಚುಳ್ಳಿ, ಚೋರೆ, ಕುಟುಕ, ಪುರುಳಿ ಮೊದಲಾದ ಹಕ್ಕಿಗಳ ವಸಂತೋದಯ ಗಾನವು ಪ್ರಾತರ್ಮೌನ ಸಮುದ್ರವನ್ನು ಮಧುರರವ ತರಂಗಿತವನ್ನಾಗಿ ಮಾಡಿತ್ತು. ತೊಯ್ದ ನೆಲದ ತಂಪು, ಮಿಂದ ಹಸುರಿನ ತಂಪು, ಮೃದು ಗಾಳಿಯ ತಂಪುಗಳಿಂದ ಜಗವೆಲ್ಲ ತಂಪಾಗಿತ್ತು. ಜೀವಿಸುವುದಕ್ಕಿಂತಲೂ ಹೆಚ್ಚಾದ ಜೀವನದ ಗುರಿ ಮತ್ತೊಂದಿಲ್ಲ ಎಂಬಂತೆ ತೋರುತ್ತಿತ್ತು. ಕಾದಂಬರಿಕಾರರ ಈ ಸಂದೇಶಕ್ಕೆ ಬೇರೆ ವ್ಯಾಖ್ಯಾನ ಅನಗತ್ಯ.

ಗಂಗಪುಟ್ಟ ಮೊದಲುಗೊಂಡು ಸರಿಸುಮಾರು ಕಾದಂಬರಿಯ ಎಲ್ಲ ಪಾತ್ರಗಳ ಮೇಲೆ ನಿಸರ್ಗ ತನ್ನ ಪ್ರಭಾವ ಬೀರುತ್ತದೆಯಾದರೂ, ಅದಕ್ಕೂ ಹೂವಯ್ಯನಿಗೂ ಜನ್ಮ ಜನ್ಮಾಂತರದ ಅವಿನಾಭಾವ ಸಂಬಂಧವಿದೆಯೆಂಬುದು ಸುಸ್ಪಷ್ಟ. ಅದು ಹೆಜ್ಜೆಹೆಜ್ಜೆಗೂ ಅವನ ಬದುಕನ್ನು ಪೋಷಿಸುತ್ತದೆ, ಕಾಯುತ್ತದೆ, ರೂಪಿಸುತ್ತದೆ. ಅವನನ್ನು ಅಧ್ಯಾತ್ಮಸಿದ್ಧಿಯ ಕಡೆಗೆ ಒಯ್ಯುತ್ತದೆ. ಸಾಮಾನ್ಯ ಸಮಯದಲ್ಲಿ ಅದು ಅವನ ಹೃದಯಕ್ಕೆ ಆನಂದವನ್ನುಂಟುಮಾಡಿದರೆ, ಕಷ್ಟದ ಸಮಯದಲ್ಲಿ ಜಟಿಲ ಸಮಸ್ಯೆಗಳು ಗರಿಗೆದರಿ ನಿಂತಾಗ ಅವನ ಮನಸ್ಸಿಗೆ ಶಾಂತಿಯನ್ನು ನಿಶ್ಚಲತೆಯನ್ನು ಕರುಣಿಸುತ್ತದೆ. ಹೂವಯ್ಯನಿಗಾಗಿ ಪ್ರಕೃತಿ, ಪ್ರಕೃತಿಗಾಗಿ ಹೂವಯ್ಯ ಸೃಷ್ಟಿಗೊಂಡಿದ್ದಂತೆ ತೋರುತ್ತದೆ. ವಿದ್ಯಾರ್ಜನೆ ಮೊಟಕುಗೊಂಡು, ತನ್ನಿಷ್ಟಕ್ಕೆ ವಿರೋಧವಾಗಿ ಮನೆಪಾಲಾಗಿ, ತಾಯಿ ವಿನಾ ಹತ್ತಿರ ಬಂಧುಗಳು ದೂರವಾಗಿ, ಅವರಿಂದ ಕಿರುಕುಳಗಳು ಅಸಹ್ಯವಾದಾಗ, ಪ್ರಣಯ ನಿರಾಸೆ ಮನಹೃದಯಗಳನ್ನು ಹಿಂಡುತ್ತಿದ್ದಾಗ, ಪ್ರಕೃತಿಯೊಂದೇ ಅವನ ಬದುಕಿಗೆ ಆಸರೆಯಾಗಿ ತಂಪೆರೆದು, ಆನಂದವನ್ನೂಡುತ್ತದೆ. ನಿಸರ್ಗದ ಸಾನ್ನಿಧ್ಯದಲ್ಲಿ ಅವನ ಆತ್ಮಯಾತ್ರೆ ನಿಶ್ಚಲವಾಗಿ ಸಾಗುತ್ತದೆ.

'ಚೈತ್ರ ಮಾಸದ ವಿಪಿನ ರಾಜಿ ಪರ್ವತಶ್ರೇಣಿ, ಪ್ರಾತಃ ಸಮಯ ಸುಖ ಶೀತಲಮಾಯಮಂಡಲ; ಇನ್ನೇನು ಗಾನದ ತಾರಾಮಂಡಲದಂತೆ ಬಿರಿದು ಸಾವಿರಾರು

ಪಕ್ಷಿಗಳ ತುಮುಲ ಕಲಗಾನವಾಗಿ ಪರಿಣಮಿಸಲಿರುವ ನಾದಗರ್ಭಿತವಾದ ಗಂಭೀರ ವನ್ಯಮೌನ ಇವುಗಳ ಮಧ್ಯೆ ಹೂವಯ್ಯನು ಒಮ್ಮೆ ರಾತ್ರಿಯಲ್ಲಿ ತನಗಾದ ಅನುಭವವನ್ನು ಕುರಿತು ಯೋಚಿಸಿ ಅಂತರ್ಮುಖಿಯಾಗುತ್ತಾ, ಮತ್ತೊಮ್ಮೆ ಅಂತರ್ಮುಖತೆಯಿಂದ ತಟಕ್ಕನೆ ಎಚ್ಚೆತ್ತು ಹೊರಗಣ ಪ್ರಕೃತಿ ರಮಣೀಯತೆಯನ್ನು (ಕಾಡು ಕತ್ತಲೆಯಿಂದ ನಿಧಾನವಾಗಿ ಹೊರಹೊಮ್ಮುತ್ತಿತ್ತು. ಬಾನು ಮೆಲ್ಲಮೆಲ್ಲನೆ ಬೆಳಗಾಗಿ ಸಾಧಾರಣ ಪ್ರಕಾಶದ ತಾರೆಗಳೆಲ್ಲ ಅಡಗಿ, ಸಪ್ತರ್ಷಿ ಮಂಡಲದ ನಕ್ಷತ್ರಗಳು ಚಿತ್ರಾ ಮತ್ತು ಸ್ವಾತಿ ನಕ್ಷತ್ರಗಳೇ ಮೊದಲಾದ ಪ್ರಥಮ ಮತ್ತು ದ್ವಿತೀಯ ವರ್ಗಕ್ಕೆ ಸೇರಿರುವ ಹಲಕೆಲವು ತಾರೆಗಳು ಮಾತ್ರ ರಾರಾಜಿಸುತ್ತಿದ್ದವು. ಅಸ್ವಾದಿಸುತ್ತ, ಶ್ವಾಸಕೋಶಗಳು ತುಂಬಿ ತುಳುಕುವಂತೆ ಉಸಿರೆಳೆದು ಬಿಡುತ್ತಾ ಬಿರುಬಿರನೆ ಮೇಲೇರಿ ಸಾಗಿದನು. ವನದೇವಿಯ ಹೃದಯ ವೀಣೆಯ ತಂತಿಗಳನ್ನು ಮಿಡಿಯುವಂತೆ ಕಾಜಾಣಗಳು ಅಲಾಪನೆ ಮಾಡತೊಡಗಿದವು. ಮರಗಳಲ್ಲಿ ಹೂ ಕೊಯುತ್ತಿದ್ದ ಸಾವಿರಾರು ಲಕ್ಷ ಲಕ್ಷ, ಕೋಟಿ ಕೋಟಿ ಜೇನ್ನೊಣಗಳ ಝೇಂಕಾರವು ಪ್ರಾರಂಭವಾಯಿತು. ಕಣಿವೆಗಳಲ್ಲಿದ್ದ ಊರು ಕೋಳಿಗಳ ಸಾಧಾರಣವಾದ ಕೂಗಿನ ಜೊತೆಗೆ ಕಾಡುಕೋಳಿಗಳ ಮಧುರ ಮನೋಹರವಾದ ಕೇಕೆಗಳೂ ಅಲ್ಲಲ್ಲಿ ಕೇಳಿಬಂದವು. ಹೂವಯ್ಯನ ಹೃದಯವು ಆನಂದ ಸ್ಪಂದಿತವಾಯಿತು. ಹೊಸ ಚೇತನವು ಎದೆಯಲ್ಲಿ ಮಿಂಚಿನಂತೆ ಸಂಚರಿಸಿತು. ಚೈತ್ರ ಪ್ರಕೃತಿಯ ಹುಟ್ಟಿನ ಅವನೆದೆರೆ ತಗುಲಿದಂತಾಯಿತು.[೧]

ಜಗತ್ತಿನ ಹಲವು ಜನರಿಗೆ ಸೂರ್ಯೋದಯ ಸೂರ್ಯಾಸ್ತಗಳೆ ಗೊತ್ತಿಲ್ಲ. ಗೊತ್ತಿದ್ದವರಿಗೆ ಇಂಥ ಸಂವೇದನಾವೇದನೆ ಪ್ರಾಪ್ತವಾಗುತ್ತದೆಂದು ಹೇಳಲಾಗದು. ಅದು ಪೂರ್ವಸಂಸ್ಕಾರದ ಸುಕೃತದಿಂದ ಲಭ್ಯವಾಗುವಂಥದು. ಸೂರ್ಯೋದಯ ಚಂದ್ರೋದಯವೆಂತು ದೇವರ ದಯೆಯೊ, ಅದರಿಂದೊದಗುವ ಅನುಭವಾನಂದವೂ ದೇವರ ದಯೆಯೇ ಸರಿ. ಅಂಥ ಆನಂದ ಹೂವಯ್ಯನಂಥವರನ್ನು ಅಧ್ಯಾತ್ಮಸಿದ್ಧಿಯ ಕಡೆಗೆ ಎತ್ತುತ್ತದೆ. ಸೂರ್ಯೋದಯದ ವರ್ಣನೆ ಎಷ್ಟೊಂದು ಸುಂದರವಾಗಿದೆ ಎಂದರೆ, ಹೂವಯ್ಯನ ಆತ್ಮದೊಡನೆ ವಾಚಕನ ಆತ್ಮವೂ ರೆಕ್ಕೆಬಿಚ್ಚಿ ಗರಿಗೆದರಿ ಹಾರಲನುವಾಗುತ್ತದೆ.

'ಮೈಲಿ ಮೈಲಿಗಳಾಚೆ, ವಿಸ್ತಾರವಾಗಿ, ಅನಂತವಾಗಿ, ದೃಶ್ಯತರಂಗ ವಿನ್ಯಾಸದಿಂದ ತುಂಗವಾಗಿ, ಉತ್ತುಂಗವಾಗಿ, ಮಹೋತ್ತುಂಗವಾಗಿ, ಹಬ್ಬಿ ಹರಿದಿದ್ದ ಪಂಚಾರಣ್ಯಗಳು ಕೊನೆಮುಟ್ಟುವಂತೆ ತೋರುತ್ತಿದ್ದ ಪೂರ್ವದಿಕ್ಕಿನಲ್ಲಿ ಅರಿಸಿನ ಧೂಳಿಯನ್ನೆರಚಿದಂತೆ

೧. ಕುವೆಂಪು, ಕಾನೂರು ಹೆಗ್ಗಡತಿ, ಪು. ೬೦೯, ಉದಯ ಪ್ರಕಾಶನ, ೨೦೧೦.

ಹಳದಿಯ ಕಾಂತಿ ನಲಿಯುತ್ತಿದ್ದ ಗಗನ ಪಟಕ್ಕೆದುರಾಗಿ ದಿಗಂತ ರೇಖೆ ಕಚ್ಚು ಕಚ್ಚಾಗಿ ಗೋಚರವಾಗತೊಡಗಿತ್ತು... ವರ್ಣನೆಗೆ ಅಸಾಧ್ಯವಾಗಿ ಬಣ್ಣಗಳ ಮೆರವಣಿಗೆ ಪ್ರಾರಂಭವಾಯಿತು. ಹೂವಯ್ಯನ ದೃಷ್ಟಿಗೆ ಭಾವಮಾತ್ರವಾಗಿದ್ದ ಭಗವಂತನ ಸೌಂದರ್ಯವು ರೂಪುಗೊಂಡು ತನ್ನೆದುರು ಪ್ರತ್ಯಕ್ಷವಾಗುತ್ತಿದ್ದಂತೆ ಅನುಭವವಾಗಿ, ಮೈಪುಲಕಿತವಾಗಿ, ಹೃದಯವು ರಸಾರ್ಧ್ರವಾಗಿ, ಕಣ್ಣು ಹನಿ ತುಂಬಿತು. ನೋಡುತ್ತಿದ್ದಂತೆ ಹಳದಿಯ ಬೆಳಕು ಕುಂಕುಮದ ಬಣ್ಣಕ್ಕೆ ತಿರುಗಿ, ಅಲ್ಲಿದ್ದ ಕಿರುಮುಗಿಲುಗಳು ಉರಿಯುವ ಚಿನ್ನದ ಬಣ್ಣವನ್ನು ತಾಳಿ ಉಜ್ವಲವಾದುವು. ಕತ್ತಲೆ ಎತ್ತಲೋ ಅಡಗಿ, ಬೆಳಕು ಬಾನಿನಿಂದ ನೆಲಕ್ಕೆ ತುಳುಕಿ ಹರಿದಂತಾಯಿತು. ದೂರದಲ್ಲಿ ಅದುವರೆಗೆ ಅಜ್ಞಾತವಾಗಿದ್ದ ಒಂದು ಕೆರೆಯ ನೀರು ಕರಗಿದ ಬೆಳ್ಳಿಯಾಗಿ ತಳತಳಿಸಿತು. ಬಹಳ ತೆಳ್ಳಗೆ ಎಲ್ಲೆಲ್ಲಿಯೂ ಹಬ್ಬಿ ಮುಸುಕಿದ್ದ ಹೊಗೆ ಮಂಜಿನಲ್ಲಿ ಹತ್ತಿರದ ಬೆಟ್ಟಗಾಡುಗಳೂ ಮೃದುವಾಗಿ ಕೋಮಲನೀಲವಾಗಿ ಕಾಣಿಸುವುದು".[೧]

ತನಗರಿವಿಲ್ಲದಂತೆಯೇ ಅವನು ಧ್ಯಾನಮಗ್ನನಾಗುತ್ತಾನೆ. ಅವನ ದೇಹದ ಕಣಕಣವೂ ಆನಂದದಲ್ಲಿ ಲಯವಾಗುತ್ತದೆ. ಭಾವಸಮಾಧಿಯ ರಸಾಗ್ನಿ ಗಂಗೆಯಲ್ಲಿ ಮುಳುಗಿ ಮಿಂದು ಜ್ವಾಲಾಮಯಾತ್ಮನಾದ ಹೂವಯ್ಯನು ಕಣ್ದೆರೆದಾಗ ಹೊತ್ತು ಎರಡು ಮೂರಾಳೆತ್ತರ ಮೇಲೇರಿದೆ. 'ಜಗತ್ತೆಲ್ಲವೂ ಶಾಂತಿ, ಸೌಂದರ್ಯ, ಅನಂದ ಮೈತ್ರಿ ಪ್ರೇಮಗಳಿಂದ ಪೂರ್ಣವಾಗಿದ್ದಂತೆ ಅವನಿಗೆ ಭಾಸವಾಗುತ್ತದೆ. ನಿಸರ್ಗ ದ್ವೇಷದಿಂದ ಲೋಕನಾಶ ನಿಸರ್ಗ ಪ್ರೇಮದಿಂದ ಲೋಕಕ್ಷೇಮವೆಂಬ ಸಂದೇಶ ಈ ಕಾದಂಬರಿಯುದ್ದಕ್ಕೂ ಹೊಳಲುಗೂಡುತ್ತದೆ.

ಪ್ರತಿಯೊಂದು ಪ್ರಕೃತಿ ವ್ಯಾಪಾರವೂ ಹೂವಯ್ಯನ ಮನಸ್ಸಿನಲ್ಲಿ ಹೊಸ ಹೊಸ ಭಾವನೆಗಳನ್ನು ಮೂಡಿಸುತ್ತದೆ. ಕಾಮಳ್ಳಿಯ ಇಂಪಾದ ಹಾಡು ಅನಂತತೆಯ ಬಸಿರಿನಿಂದ ಅರ್ಥಪೂರ್ಣವಾಗಿ ಬರುತ್ತಿದ್ದಂತೆ, ಕಾಡು ಹೂವುಗಳು ಆತ್ಮದ ಮನೋಹರವಾದ ಸಂದೇಶವನ್ನು ಹೊತ್ತು ತಂದ ದೇವದೂತದಂತೆ ಅವನಿಗೆ ತೋರುತ್ತದೆ.

'ಸೀತೆಯೊಡನೆ ವಿವಾಹ ಗೊತ್ತಾಗಿದ್ದ ಕೃಷ್ಣಪ್ಪ ಹುಲಿಯ ಬಾಯಿಗೆ ಸಿಕ್ಕಿ ಸತ್ತಾಗ ಹೂವಯ್ಯನ ಮನಸ್ಸು ವಿಹ್ವಲಗೊಂಡು ಹೃದಯ ಕಳವಳಕ್ಕೀಡಾಗುತ್ತದೆ. ಪ್ರಯತ್ನ-ಪೂರ್ವಕವಾಗಿ ಮನಸ್ಸನ್ನು ಪ್ರಕೃತಿ ಸೌಂದರ್ಯದ ಕಡೆಗೆ ತಿರುಗಿಸಿದರೂ ಡೊಂಕು-ಬಾಲದಂತೆ ಹಿಂದಿನ ಸ್ಥಿತಿಗೆ ಬರುತ್ತದೆ. ತುಸು ಹೊತ್ತು ಆಲೋಚನೆಯನ್ನದುಮಿ

---

೧. ಕುವೆಂಪು, ಕಾನೂರು ಹೆಗ್ಗಡತಿ, ಪು. ೬೦೯, ಉದಯ ಪ್ರಕಾಶನ, ೨೦೧೦.

ಎದುರಿಗಿದ್ದ ಭೀಮಾಕಾರದ ಆಲದ ಮರದ ಕಡೆಗೆ ತಬ್ಬಲಿಯಾಗುತ್ತಾನೆ. ಆ ವೃಕ್ಷ ಭೈರವನನ್ನು ನೋಡುತ್ತ ನೋಡುತ್ತ ನೋವನ್ನು ಮರೆಯುತ್ತಾನೆ. ಅದು ನಾಲ್ದೆಸೆಗಳಿಗೂ ಸ್ವಚ್ಛಂದವಾಗಿ ಹರಡಿಕೊಂಡು ತನ್ನದೇ ಒಂದು ಸಂಸಾರ ಹೂಡಿತ್ತು. ಅದರ ಸಣ್ಣ ಸಣ್ಣ ಬಿಳಲುಗಳು ತಪಸ್ಸಿಗೆ ಕುಳಿತ ಮಹರ್ಷಿಯ ಗಡ್ಡವನ್ನೂ, ದಿಕ್ಕುದಿಕ್ಕಿಗೆ ಧೀರವಾಗಿ ಕೈಚಾಚಿದ್ದ ಹೆಗ್ಗೊಂಬೆಗಳು ಗರಡಿ ಸಾಧನೆ ಮಾಡಿದವನ ಅಂಗವಿನ್ಯಾಸವನ್ನು, ಭೂಮಿಗಿಳಿದು ಬೆಳೆದು ನಿಂತ ಹೆಬ್ಬಿಳಲುಗಳು ದೊಡ್ಡ ದೇವಾಲಯದ ಕಂಭಗಳ ಸಾಲ್ಗಳನ್ನು ನೆನಪಿಗೆ ತರುತ್ತಿದ್ದವು. ದಟ್ಟವಾಗಿ ಬೆಳೆದಿದ್ದ ದಪ್ಪವಾದ ಎಲೆಗಳು ಕೊಡೆ ಹಿಡಿದಂತಿದ್ದರೂ ಅಲ್ಲಲ್ಲಿ ಬಿಸಿಲು ತೂರಿ ಬಂದು ಹಸುರು ನೆಲದ ಮೇಲೆ ಕೋಲು ಕೋಲಾಗಿ ಬೀಳುತ್ತಿತ್ತು. ಎಳೆಬಿಸಿಲು ಬಿದ್ದ ಎಲೆಗಳಿಂದ ಹಸುರಿನ ಚಿಲುಮೆ ನಳನಳಿಸಿ ಚಿಮ್ಮುತ್ತಿತ್ತು. ಅಲ್ಲಲ್ಲಿ ದೊಡ್ಡ ಹಲಸಿನ ಕಾಯಿಯನ್ನು ಗಾತ್ರವಾಗಿ ಮರದೆಲೆಗಳನ್ನು ಜೋಡಿಸಿ ಬೆಸೆದು ಮಾಡಿದ್ದ ಚಗಳಿ ಇರುವೆಯ ಗೂಡುಗಳು ಕೊಟ್ಟೆಕೊಟ್ಟೆಯಾಗಿ ಕಾಣುತ್ತಿದ್ದವು. ನಸುಗೆಂಪು ಬಣ್ಣದ ದೊಡ್ಡ ದೊಡ್ಡ ಚಗಳಿ ಇರುವೆಗಳು ಎಲೆಗಳ ಮೇಲೆಯೂ ಕೊಂಬೆಗಳ ಮೇಲೆಯೂ ಹರಿದಾಡುತ್ತಿದ್ದವು. ಹಲಕೆಲವು ಹಕ್ಕುಗಳ ಕೊಂಬೆಗಳಲ್ಲಿ ಹಾಡಿ ಹಾರಾಡುತ್ತಿದ್ದವು. ಗಾಳಿ ಬೀಸಿದಂತೆಲ್ಲ ಮರದ ಹನಿಗಳು ಬಿದ್ದು ಪಟಪಟನೆ ಸದ್ದು ಮಾಡುತ್ತಿದ್ದವು. ಆ ಮರದಲ್ಲಿ ಪುರಾತನ ನೂತನಗಳೆರಡೂ ಸಂಗಮಿಸಿ ಮುದುಕನ ಗಾಂಭೀರ್ಯದೊಡನೆ ಹುಡುಗನ ಹರ್ಷವು ಸೇರಿಕೊಂಡಂತಿತ್ತು. ಹೂವಯ್ಯನ ಮನಸ್ಸಿಗೆ ಆ ವೃಕ್ಷದಲ್ಲಿ ಏನೋ ಒಂದು ವ್ಯಕ್ತಿತ್ವವಿರುವಂತೆ ಭಾಷವಾಯಿತು.[೧] ಅದು ಇತರ ಮರಗಳಂತಿರದೆ, ತನ್ನದೇ ಒಂದು ವಿಭಿನ್ನ ಸಮಗ್ರ ಸಂಸಾರವೆಂಬಂತೆ, ಒಂದು ವಿಶಿಷ್ಟ ಲೋಕವೆಂಬಂತೆ ವಿಭ್ರಾಜಿಸುತ್ತದೆ. ಆ ಮರದ ಮಹಾಚೈತನ್ಯ ಹೂವಯ್ಯನನ್ನು ಕಂಗೆಡಿಸಿದ್ದ ವಿಧಿಯ ನೈಷುವ್ಯವನ್ನೂ ಲೋಕದ ದುಖವನ್ನೂ ಮರೆಸಿದರೆ, ಸೋಮನಂಥ ಡೊಳ್ಳು ಹೊಟ್ಟೆಯ ಸೇವಕನ ನಾಲಗೆಯ ರುಚಿ ದೋಷಕ್ಕೆ ಪರಿಹಾರವನ್ನೊದಗಿಸುತ್ತದೆ. ಅವನು ಚಟ್ನಿಗೋಸ್ಕರ ಚಗಳಿಯಿರುವೆಗಳನ್ನೂ ಮೊಟ್ಟೆ ಮರಿಗಳನ್ನು ಗೂಡಿನಿಂದ ಸೂರೆಮಾಡಲು ಬಂದಿದ್ದಾನೆ. ಆ ಮರಕ್ಕೆ ದೊಡ್ಡವರು, ಬಡವರು ಎಂಬ ಭೇದವೆ ಇಲ್ಲ. ಅದು ಪ್ರಕೃತಿಮಾತೆಯ ಪ್ರತಿನಿಧಿಯಾಗಿ ತನ್ನ ಬಳಿಗೆ ಬಂದವರ ಅಗತ್ಯಗಳಿಗೆ ತಕ್ಕಂತೆ ಆಶೀರ್ವಾದ ಮಾಡುತ್ತದೆ.

---

೧. ಕುವೆಂಪು, ಕಾನೂರು ಹೆಗ್ಗಡತಿ, ಪು. ೩೦೧, ಉದಯ ಪ್ರಕಾಶನ, ಮೈಸೂರು, ೨೦೦೦.

ಪ್ರಕೃತಿ ಮಾನವರ ಸಂಬಂಧಗಳು ಸಾವಿರಾರು, ಪ್ರಾಕೃತಿಕ ವ್ಯಾಪಾರಗಳು ಅಸಂಖ್ಯ. ಮೂಢನಂಬಿಕೆಗಳ ಬೆಳವಣಿಗೆ, ದೆವ್ವಭೂತ, ಜಕ್ಕಣಿ, ಪಂಜ್ರೊಳ್ಳಿ ಮೊದಲಾದ ಅಂತರ ಬೆಂತರಗಳ ಪೂಜೆ, ಕೋಳಿಯಂಕ ಕಾಡುಮೃಗಗಳ ಕಾಟ ಒಂದು ಕಡೆಯಾದರೆ, ಮನುಷ್ಯನ ಅಸ್ತಿತ್ವಕ್ಕೆ ಹಾಗೂ ಜೀವನಕ್ಕೆ ಬೇಕಾದ ಸೌಕರ್ಯಗಳು, ಆರ್ಥಿಕ ಸಂಪಾರನೆ ಭೇಟಿ ಮೊದಲಾದವು ಮತ್ತೊಂದು ಕಡೆಗಿವೆ.

ಹಾಲುತುಂಬಿದ್ದ ಆ ತಂಬಿಗೆಯ ಕಂಠದಲ್ಲಿ ಬೆಳ್ನೊರೆ ಬಿಳಿಯುಣ್ಣೆಯ ಮುಗಿಲ ಮುದ್ದೆಯಂತೆ ಮೃದುವಾಗಿ ಮನೋಹರವಾಗಿ, ಮಾತೃ ವಾತ್ಸಲ್ಯದಂತೆ ಆಪ್ಯಾಯ-ಮಾನವಾಗಿತ್ತು. ಮರದ ನೆಳಲು ಬುಡದಲ್ಲಿ ಬಳಲಿ ಮಲಗಿ ದಣಿವಾರಿಸುತ್ತಿತ್ತು. ಧಣಿವನ್ನಾರಿಸುವ ನೆಳಲೇ ದಣಿವಾರಿಸಿಕೊಳ್ಳುತ್ತದೆಯೆಂದರೆ, ಬೇಸಗೆಯ ಪ್ರಖರತೆಯ ಉರುಬು ಸ್ಪಷ್ಟವಾಗುತ್ತದೆ. ಅರಣ್ಯಾವೃತವಾದ ಗಂಭೀರ ಸಹ್ಯಾದ್ರಿ ಶ್ರೇಣಿಗಳ ಗಿರಿ ಕಂದರಗಳ ಮೇಲೆ ಇರುಳ ದೇವಿ ತನ್ನುಡೆಯ ಕರಿಸೆರಗನ್ನು ಮೆಲ್ಲನೆ ಹೊರಿಸುತ್ತಿದ್ದಳು. ಸಹ್ಯಾದ್ರಿಯ ಭಾಗಗಳು ಪ್ರಾತಃಕಾಲದಲ್ಲಿ ನಿಂತು ನೋಡಿದರೆ, ನೀಲವಾಯು ಮಂಡಲದಲ್ಲಿ ಪಶ್ಚಿಮ ನೀಲಾಕಾಶಕ್ಕೆದುರಾಗಿ ಮೈಲುತುತ್ತಿನ ಮಹಾರಾಣಿಗಳಂತೆ ದಿಗಂತ ಖಚಿತವಾಗಿ ರಂಜಿಸುತ್ತಿದ್ದವು. ಎಲ್ಲಿ ನೋಡಿದರೂ, ಎತ್ತ ಆಲಿಸಿದರೂ, ಕತ್ತಲೆ ಮತ್ತು ಮೌನಗಳ ಪಿತೂರಿಯೆ ಕಾಣುತ್ತಿತ್ತು. ಕೇಳುತ್ತಿತ್ತು. ಸಂಜೆಯ ಬಾನು ಕತ್ತಲೆ ಹಣ್ಣಿನಂತೆ ಮಾಗತೊಡಗಿತು. ಹೆಜ್ಜೇನಿನ ಗೂಡಿಗೆ ಹೊಗೆ ಹಾಕಿದರೆ, ಜೇನ್ನೊಣಗಳ ಹಿಂಡು ಭೋರೆಂದು ಝೇಂಕರಿಸುತ್ತಾ ಎದ್ದು ಹಾರಾಡುವಂತೆ ಜನಗಳ ಸಮೂಹವು ಎಲ್ಲರೂ ಊಟಕ್ಕೇಳಬೇಕು ಎಂಬ ಕೂಗು ಕಿವಿಗೆ ಬಿದ್ದ ಕೂಡಲೇ ಉಕ್ಕಿ ಎದ್ದು, ಸಮೀಪದ ಗದ್ದೆ ಬಯಲಿಗೆ ದಾಳಿ ನಡೆಯಿತು. ಮದ್ದು ಸಿಡಿದು ಚರ್ಮಸುಟ್ಟು ಸುಲಿದು ಹೋಗಿ ಸತ್ತುಬಿದ್ದಿದ್ದ ಇಬ್ಬರು ಶ್ಯಾಮಯ್ಯ ಗೌಡರ ಜೀತದಾಳುಗಳ ಶವಗಳಂತೂ ಕಾಗೆ ಹಿಂಡಿಗೆ ಕಲ್ಲೆಸೆದಂತೆ, ಮದುವೆಗೆ ನೆರೆದಿದ್ದ ಜನರನ್ನು ಚದುರಿಸಿ ಓಡಿಸಿಬಿಟ್ಟನು.

ಹೂವಿನ ರಸಕ್ಕಾಗಿ ಬಣ್ಣದ ಚಿಟ್ಟೆ ಹಾರಾಡುತ್ತಿದೆ. ಚೈತ್ರಮಾಸದ ಪ್ರಾತಃ ಸಮಯದಲ್ಲಿ ಗಿಡವೆಲ್ಲ ವಸಂತ ಸಂಭ್ರಮದಿಂದ ತುಂಬಿ ಹೋಗಿದೆ. ಹೂವು ರಾಶಿರಾಶಿಯಾಗಿ ಕಿಕ್ಕೆರಿದಿದೆ. ಒಂದೊಂದು ಹೂವಿನ ಹೃದಯದ ಬಟ್ಟಲು ಜೇನಿನಿಂದ ತುಂಬಿದೆ. ಒಂದೊಂದು ಹೂವು ಚೆಲುವಾದ ಚಿಟ್ಟೆಯನ್ನು ತನ್ನ ಹೃದಯದ ಮಕರಂದ ಪಾನಕ್ಕೆ ಆಹ್ವಾನಿಸುತ್ತಿದೆ. ಚಿಟ್ಟೆಯ ಮನಸ್ಸು ಅತ್ತಯಿತ್ತ ಪಾದರಸದಂತೆ ಚಲಿಸುತ್ತಿದೆ. ಹಾಗೆಯೇ ಗಿಡದಲ್ಲಿ ಕೊಂಬೆಯಿಂದ ಕೊಂಬೆಗೆ ಹಬ್ಬಿ ಹೆಣೆದಿದ್ದ ಜೇಡನ ಬಲೆಯಲ್ಲಿ ಸಿಕ್ಕಿಬಿದ್ದಿದ್ದ ಇಬ್ಬನಿಗಳೂ ಬಾಲಸೂರ್ಯ ಕಾಂತಿಯಲ್ಲಿ ಬೆಳ್ಳಿಯ ಹನಿಗಳಂತೆ ಹೊಳೆಯುತ್ತ ಪಾದರಸದಂತೆ ವಿಕಂಪಿಸುತ್ತಿವೆ. ಕೆಲವು ಹನಿಗಳಲ್ಲಿ ಕಾಮನಬಿಲ್ಲಿನ

ಬಣ್ಣಗಳೂ ಮಿರುಗುತ್ತಿವೆ. ಅಯ್ಯೋ, ಇದ್ದಕ್ಕಿದ್ದ ಹಾಗೆ ಹಾರುತ್ತಿದ್ದ ಚಿಟ್ಟೆ ಜೇಡನ ಬಲೆಗೆ ಸಿಕ್ಕಿ ತಪ್ಪಿಸಿಕೊಳ್ಳಲು ಒದ್ದಾಡುತ್ತಿದೆ. ಆದರೆ ತಂದೆತಾಯಿಯರು ಅವಳನ್ನು ಸಿಂಗಪ್ಪಗೌಡರ ಮಗ ಕೃಷ್ಣಪ್ಪನಿಗೆ ಮದುವೆಮಾಡಿಕೊಡಲು ನಿಶ್ಚಯಿಸುತ್ತಾರೆ. ಮದುವೆಯಾಗುವ ಮುನ್ನವೇ ಕೃಷ್ಣಪ್ಪ ಹುಲಿಯ ಬಾಯಿಗೆ ಸಿಕ್ಕು ಸಾಯುತ್ತಾನೆ. ಆ ಮೇಲೆ ಅವಳನ್ನು ಚಂದ್ರಯ್ಯ ಗೌಡರ ಮಗ ರಾಮಯ್ಯನಿಗೆ ತಂದುಕೊಳ್ಳಲು ಮಾತುಕತೆ ನಡೆಯುತ್ತದೆ. ಎರಡನೆಯ ಸಲ ಅವಳ ಹೃದಯಕ್ಕೆ ಬಾರಿ ಆಘಾತವಾಗುತ್ತದೆ. ಆ ಆಘಾತ ದುರಂತದಲ್ಲಿ ಪರ್ಯಾವಸನವಾಗುತ್ತದೆ. ಮದುವೆಯಶಾಸ್ತ್ರ ಮುಗಿದ ನಂತರ, ಮಾವನ ಮನೆಯಲ್ಲಿ ಜೋಯಿಸರ ಕೈಯಲ್ಲಿ ಅವಳನುಭವಿಸಿದ ಹಿಂಸೆಯು ರಾಮಯ್ಯ ತೀರಿಕೊಂಡರೂ ಹೂವಯ್ಯನನ್ನು ಭೌತಿಕವಾಗಿ ಮದುವೆಯಾಗದಿದ್ದರೂ ಅವಳ ಚಲ ಈಡೇರಿದ ಧ್ವನಿ ಈ ಮಹೋಪಮೆಯಲ್ಲಿ ಸುಸ್ಪಷ್ಟವಾಗಿ ಅಭಿವ್ಯಕ್ತಿಗೊಳ್ಳುತ್ತದೆ.

ಸೀತೆಯ ವಿವಾಹಾನಂತರ ಹೂವಯ್ಯನ ಒಂದೇ ಒಂದು ಆಸೆಯೂ ಮುದುರಿಹೋಗುತ್ತದೆ. ಜೀವನದ ಗುರಿ ಮತ್ತು ದಾರಿ ಮಸಕಾಗುತ್ತದೆ. ಅವನ ಅಂತರಂಗದ ತುಮುಲದ ರಣರಂಗವಾಗುತ್ತದೆ. ನಿಸರ್ಗ ಅವನ ಕೈಹಿಡಿಯದಿದ್ದರೆ, ಅವನು ನಿಸರ್ಗದೊಡನೆ ಆತ್ಮೀಯವಾಗಿ ಬೆರೆಯದಿದ್ದರೆ ಅವನ ಬದುಕು ಬಂಡೆಗೆ ಬಡಿದ ಹಡಗಾಗುತ್ತಿತ್ತೆಂದು ತೋರುತ್ತದೆ. ಆದರೂ ಆತನ ಅಂತರಂಗದಲ್ಲಿ ಅನೇಕ ಬದಲಾವಣೆಗಳಾಗುತ್ತಿದ್ದವು. ಅವನ್ನು ಸಮುದ್ರಾಂತರಂಗದ ವ್ಯಾಪಾರಗಳಿಗೆ ಕಾದಂಬರಿಕಾರರು ಹೋಲಿಸುತ್ತಾರೆ. ಮನುಷ್ಯನ ಅಂತಶ್ಚಿತ್ತವು ಸಮುದ್ರದಂತೆ ಗಂಭೀರವಾಗಿದೆ. ಅಪಾರವಾಗಿದೆ. ಅಲ್ಲಿ ನಡೆಯುವ ಘಟನೆಗಳು ನಮಗೆ ಅಗೋಚರವೆಂದೇ ಹೇಳಬಹುದು. ಸಮುದ್ರದ ಒಳಗೆ ಜರುಗುವ ಘಟನೆಗಳ ಪರಿಣಾಮವಾಗಿ ಇದ್ದಕ್ಕಿದ್ದಂತೆ ದ್ವೀಪಗಳೇಳುತ್ತವೆ, ದ್ವೀಪಗಳು ಮುಳುಗುತ್ತವೆ. ನೀರು ಭೂಮಿಯನ್ನು ಕ್ರಮಿಸುತ್ತದೆ. ಅಧಿಕಾ ಭೂಮಿಯೇ ಕಡಲನ್ನು ತಳ್ಳಿದಂತಾಗಿ ನೀರು ಹಿಂಜರಿಯುತ್ತದೆ. ತೀರವು ಕುಸಿದು ನೆಲವು ಕೊಚ್ಚಿಹೋಗುತ್ತದೆ. ಅಥವಾ ಸಮುದ್ರತಲದ ಅನರ್ಘ್ಯ ರತ್ನಗಳೊಡನೆ ಅಲ್ಲಿ ವಾಸಿಸುವ ವಿಚಿತ್ರವೂ, ವಿಕಾರವೂ, ಭಯಂಕರವೂ ಆದ ಪ್ರಾಣಿಗಳೂ ದಡಕ್ಕೆ ಚಿಮ್ಮಿ ಬೀಳುತ್ತವೆ. ಮೇಲೆ ನಿಂತು ನೋಡುವವರಿಗೆ ಈ ವ್ಯಾಪಾರಗಳು ಆಕಸ್ಮಿಕಗಳಂತೆ, ವಿಪ್ಲವಗಳಂತೆ, ಅದ್ಭುತಗಳಂತೆ ತೋರುತ್ತವೆ. ಆದರೆ ಭೂಗರ್ಭ, ಸಮುದ್ರ ಗರ್ಭಗಳ ವಿಚಾರವಾದ ವಿಜ್ಞಾನವನ್ನು ತಿಳಿದ ಶಾಸ್ತ್ರಜ್ಞರಿಗೆ ಆ ವ್ಯಾಪಾರಗಳು ಅದ್ಭುತಗಳೂ ಅಲ್ಲ, ಆಕಸ್ಮಿಕವೂ ಅಲ್ಲ. ವಿಪ್ಲವಗಳೂ ಅಲ್ಲ. ಸಕಾರಣಾವಾಗಿ ಕಾಲದೇಶಗಲ್ಲಿ ವಿಕಾಸಹೊಂದಿದ ಪ್ರಕೃತಿ ಘಟನೆಯ ಶಿಖರಗಳಾಗುತ್ತವೆ. ಹಾಗೆಯೇ ಹೂವಯ್ಯನ ಅಂತರಾತ್ಮದ ನಿಗೂಢ

ಗಹ್ವರದಲ್ಲಿ ಬಾಹ್ಯ ಕೃಷ್ಣನಿಗೆ ತಿಳಿಯದಂತೆ ಅನೇಕ ವ್ಯಾಪಾರಗಳು ಜರುಗುತ್ತಿದ್ದವು. ಅವುಗಳು ಹೊರಗೆ ಪ್ರಕಾಶಿತವಾದಾಗ ಅವನಿಗೆ ವಿಸ್ಮಯವಾಗುತ್ತಿತು.

ಸೃಷ್ಟಿಯ ಹಾಗೂ ಜೀವನದ ವಿಕಾಸ ಕ್ರಮದಲ್ಲಿ ಬಾಹ್ಯ ವ್ಯಾಪಾರಗಳಷ್ಟೇ, ಅವಕ್ಕಿಂತಲೂ ಮಿಗಿಲಾಗಿ ಅಂತರಂಗಿಕ ವ್ಯಾಪಾರಗಳ ಪಾತ್ರ ಮಹತ್ತರವಾದವು. ಅವು ಕರ್ತೃವಿಗೂ ಅರಿವಿಲ್ಲದಂತೆಯೇ ನಡೆದು ಹೋಗುತ್ತದೆ. ಅನೇಕ ಮಹತ್ವ-ಪೂರ್ಣವಾದ ಪರಿಣಾಮಗಳಿಗೆ ಅವೇ ಮುಖ್ಯವೆಂಬುದನ್ನು ಮರೆಯುವಂತಿಲ್ಲ. ಈ ಕಾದಂಬರಿ ಹೂವಯ್ಯನ ಬದುಕು, ಮಲೆನಾಡಿನ ಜೀವ ಸತ್ತು ನಿಸರ್ಗ ವ್ಯಾಪಾರಿಗಳ ತ್ರಿವೇಣಿ ಸಂಗಮವಾಗಿದೆಯಲ್ಲದೆ. ಮಾನವ ನಿಸರ್ಗಗಳ ಅವಿನಾಭಾವ ಸಂಬಂಧ ಅದ್ವಿತೀಯ ದಾಖಲೆಯಾಗಿದೆ. ಡಾ. ಕರೀಗೌಡ ಬೀಚನಹಳ್ಳಿಯವರು ಪ್ರಾದೇಶಿಕತೆ-ಯನ್ನು ಕುರಿತು ಕುವೆಂಪು ಎರಡೂ ಕಾದಂಬರಿಗಳು ತಮ್ಮ ಪ್ರಾದೇಶಿಕ ವೈಶಿಷ್ಟ್ಯ, ಪಾತ್ರರಚನೆಯ ವೈವಿಧ್ಯ, ವಾಸ್ತವತೆ ಮತ್ತು ನಿಸರ್ಗದ ವರ್ಣನೆಗಳಿಂದ ಕೂಡಿದ್ದು ಚೇತೋಹಾರಿಯಾಗಿವೆ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ."[೧]

೧. ಕರೀಗೌಡ ಬೀಚನಹಳ್ಳಿ (ಡಾ), ಕುವೆಂಪು ಮತ್ತು ದಲಿತ ಸಂವೇದನೆ, ಪು. ೬೪, ಅನಿಕೇತನ, ೨೦೦೫.

# ಉಪಸಂಹಾರ

ಈವರೆಗಿನ ಅಧ್ಯಯನದಿಂದ ಕುವೆಂಪು ಕಾದಂಬರಿಗಳಲ್ಲಿ ದಲಿತ-ಬಂಡಾಯದ ನೆಲೆಗಳ ಒಂದು ಸಮಗ್ರ ಪರಿಶೀಲನೆ ದೊರೆತಂತಾಗಿದೆ. ಕುವೆಂಪುರವರ 'ಕಾನೂರು ಹೆಗ್ಗಡತಿ' ಮತ್ತು 'ಮಲೆಗಳಲ್ಲಿ ಮದುಮಗಳು' ಕಾದಂಬರಿಗಳು ಬಂಡಾಯದ ದೃಷ್ಟಿಯಿಂದ ಅತ್ಯಂತ ಮಹತ್ವದ ಕಾದಂಬರಿಗಳೆಂದು ಗುರುತಿಸಬಹುದಾಗಿದೆ.

ಮೊದಲ ಅಧ್ಯಾಯದಲ್ಲಿ ದಲಿತ-ಬಂಡಾಯ ಸಾಹಿತ್ಯದ ಹಿನ್ನೆಲೆ, ಸ್ವರೂಪಗಳನ್ನು ಕನ್ನಡ ಸಾಹಿತ್ಯ ಸಂದರ್ಭದ ಚೌಕಟ್ಟಿನಡಿಯಲ್ಲಿ ಚರ್ಚಿಸಲಾಗಿದೆ. ಪಂಪನಿಂದ ಪ್ರಾರಂಭಗೊಂಡು ಕುವೆಂಪುರವರೆಗೆ ಬಂಡಾಯದ ಎಳೆಗಳನ್ನು ಗುರುತಿಸಲಾಗಿದೆ. ಅಲ್ಲದೆ ತದನಂತರದ ದಲಿತ-ಬಂಡಾಯ ಸಾಹಿತ್ಯದ ಕಾಲಘಟ್ಟದಲ್ಲಿ ಅದು ಎಷ್ಟು ವಿಶಾಲತೆಯನ್ನು ಪಡೆದುಕೊಂಡಿದೆ ಎಂಬುದನ್ನು ಕೂಡ ಚರ್ಚಿಸಲಾಗಿದೆ.

ಎರಡನೆಯದರಲ್ಲಿ ಕುವೆಂಪುರವರ ಎರಡೂ ಕಾದಂಬರಿಗಳ ಸಂಕ್ಷಿಪ್ತ ಪರಿಚಯವನ್ನು ಮಾಡಿಕೊಡಲಾಗಿದೆ. ಎರಡು ಕಾದಂಬರಿಗಳ ಕಾರಸ್ಥಾನ ಮಲೆನಾಡು (ಅದರಲ್ಲೂ ಸೀತೆಮನೆ, ಕಾನೂರು, ಬೆಟ್ಟಳ್ಳಿ, ಮೇಗರವಳ್ಳಿ) ಮೊದಲ ಕಾದಂಬರಿಯು ೧೯೧೯ ಸುಮಾರಿನದಾಗಿದ್ದು, ೧೯೩೬ರಲ್ಲಿ ಪ್ರಕಟಗೊಂಡಿದ್ದರೆ, ಎರಡನೇ ಕಾದಂಬರಿ ಸ್ವಾತಂತ್ರ್ಯಪೂರ್ವದ ಕಥಾವಸ್ತುಗಳನ್ನೊಳಗೊಂಡಿದ್ದು, ೧೯೬೭ರಲ್ಲಿ ಪ್ರಕಟಗೊಂಡಿದೆ. ಹಾಗೆ ನೋಡಿದರೆ 'ಮಲೆಗಳಲ್ಲಿ ಮದುಮಗಳು' ಕಾದಂಬರಿ ಕಥನ ಹಾಗೂ ವೈವಿಧ್ಯತೆಯ ದೃಷ್ಟಿಯಿಂದ 'ಕಾನೂರು ಹೆಗ್ಗಡತಿ'ಗಿಂತ ಹಿಂದಿನ ಕಾಲವನ್ನು ಪ್ರತಿಬಿಂಬಿಸುತ್ತದೆ. ಪೊಲೀಸರ ಭಯದಿಂದ ತಲೆತಪ್ಪಿಸಿಕೊಂಡು ಮೇಗರವಳ್ಳಿ ಭಾಗದಿಂದ ತೀರ್ಥಹಳ್ಳಿ ಹತ್ತಿರ 'ದೋಣಿಗಂಡಿ'ಯಲ್ಲಿ ತುಂಗಾನದಿ ದಾಟಿ ಮುತ್ತೂರು ಸೀಮೆಗೆ ಓಡಿಹೋಗುವ ನಾಯಿಗುತ್ತಿ ಎರಡು ಕಾದಂಬರಿಗಳ ನಡುವಿನ ಕೊಂಡಿಯಾಗಿದ್ದಾನೆ. ಮುಂದೆ ಅವನು ಕಾನೂರಿನ ಮನೆಯ ಜೀತದಾಳಾಗಿ 'ಕಾನೂರು ಹೆಗ್ಗಡತಿ'ಯಲ್ಲಿ ಕಾಣಿಸಿಕೊಳ್ಳುತ್ತಾನೆ. ಇದರಿಂದಾಗಿ ಎರಡೂ ಕಾದಂಬರಿಗಳ ಅಂತಃಸಂಬಂಧ ಮತ್ತು ವ್ಯವಸ್ಥಿತವಾದ ಬೆಳವಣಿಗೆಗಳು ತಿಳಿದುಬರುತ್ತವೆ. ಈ ವಿಷಯ ಎರಡನೆಯ ಅಧ್ಯಾಯದಲ್ಲಿ ಚರ್ಚೆಗೆ ಒಳಗಾಗಿದೆ.

ಮೂರನೇ ಅಧ್ಯಾಯದಲ್ಲಿ ಜಮಿನ್ದಾರಿ ಪದ್ಧತಿಯ ಜೊತೆಗೆ ದಲಿತರ ಶೋಷಣೆಯನ್ನು ಕಾದಂಬರಿಗಳಲ್ಲಿ ಚಿತ್ರಿಸಿದ್ದಾರೆ. ಇದಕ್ಕೊಂದು ನಿದರ್ಶನ ದೊಡ್ಡಬೀರನ ಮಗ ಸಣ್ಣಬೀರನಿಗೆ ಅಜ್ಜಿ ಸಾಬು ಹೊಡೆದ ಹೊನ್ನಾಳಿ ಹೊಡೆತ ಸಾಕ್ಷಿಯಾಗಿದೆ. ಗದ್ದೆಯನ್ನು ಉಳುವಾಗ ಚಂದ್ರಯ್ಯಗೌಡರು ಹೊಡೆಯುವ ಚಿತ್ರ

ಕೂಡ ನೋಡಬಹುದು. ಹೀಗೆ ವಿವಿಧ ಮಗ್ಗುಲುಗಳಲ್ಲಿ ಚಿತ್ರಗೊಂಡಿರುವ ಜಮಿನ್ದಾರಿ ವ್ಯವಸ್ಥೆ, ಜೀತಪದ್ಧತಿ, ಕ್ರೌರ್ಯ, ಹಿಂಸೆಯನ್ನು ಕುವೆಂಪುರವರು ನಿರಾಳವಾಗಿ ಚಿತ್ರಿಸಿರುವುದನ್ನು ಗಮನಿಸಬಹುದಾಗಿದೆ. ಅಲ್ಲದೆ ದಲಿತವರ್ಗಗಳಿಗೆ ತಮ್ಮದೆಯಾದ ಒಂದು ಅಸ್ತಿತ್ವವಿಲ್ಲದಿರುವುದು, ಜಮೀನ್ದಾರರು ಆಸ್ತಿವಿಷಯದಲ್ಲಿ ಪಾಲಾದರೆ ದಲಿತರು ಅವರ ಒಂದೊಂದು ಪಾಲು ಎಂಬಂತೆ ಇರುವುದನ್ನು ನೋಡಬಹುದು.

ಐದನೆಯ ಅಧ್ಯಾಯದಲ್ಲಿ ಜೀವನದರ್ಶನವನ್ನು ಕುರಿತು ಚರ್ಚಿಸಲಾಗಿದೆ. ಕುವೆಂಪುರವರ ಎಲ್ಲಾ ಸಾಹಿತ್ಯ ಪ್ರಕಾರಗಳಲ್ಲಿಯೂ ಜೀವನದರ್ಶನವನ್ನು ನೋಡಬಹುದಾಗಿದೆ. ಅವರ ಆಧ್ಯಾತ್ಮಿಕತೆ ಸಾಮಾಜಿಕ ವಾಸ್ತವಿಕ, ಐಹಿಕ ಸಂವೇದನೆಗಳಿಗೆ ಮತ್ತು ನಿಸರ್ಗದ ಸೌಂದರ್ಯಕ್ಕೆ ವಿಮುಖವಾದುದಲ್ಲ. ಪ್ರತಿಯಾಗಿ ಇವೆಲ್ಲವುಗಳಿಗೆ ಒಂದು ಪರಿವಲಯವನ್ನು ಕಲ್ಪಿಸಿಕೊಡುವ ಬಗೆಯದು ಎಂದು ಗುರುತಿಸಲಾಗಿದೆ. ಪೂರ್ಣ ದೃಷ್ಟಿ 'ರಸೋ ವೈಸಃ', ಪ್ರಕೃತಿಯೊಲ್ಮೆಯ ಪರಮನಾರಾಧನೆ, ವಿಶ್ವಪಥ ಮನುಜಮತ, ನಿರಂಕುಶಮತಿಗಳಾಗಿ ಮುಂತಾದ ಕುವೆಂಪು ಸೂಕ್ತಿಗಳು, ಶೀರ್ಷಿಕೆಗಳು ಅವರ ಒಟ್ಟು ದರ್ಶನದ ಜೀವಂತ ಭಾಗಗಳಾಗಿವೆ. ಇದೆಲ್ಲವನ್ನು ಈ ಅಧ್ಯಾಯದಲ್ಲಿ ಗುರುತಿಸಲಾಗಿದೆ.

ಆರನೆಯ ಅಧ್ಯಾದಲ್ಲಿ ಪ್ರಾದೇಶಿಕತೆಯನ್ನು ಕುರಿತು ಚರ್ಚಿಸಲಾಗಿದೆ. ಒಂದು ಪ್ರದೇಶದ ಪ್ರಾದೇಶಿಕತೆ ಎಂಬುದು ಅದರ ಭೌಗೋಳಿಕ, ಭಾಷಿಕ, ಸಾಂಸ್ಕೃತಿಕ ಮತ್ತು ಸಾಮಾಜಿಕ ಅಂಶಗಳಲ್ಲಿ ವ್ಯಕ್ತವಾಗುತ್ತದೆ. ಒಂದು ಶ್ರೇಷ್ಠ ಕೃತಿಯ ಉತ್ತಮಾಂಶಗಳನ್ನು ಪ್ರಾದೇಶಿಕತೆ ಹೆಚ್ಚಿಸಬಹುದು. ಕುವೆಂಪು ಅವರ ಕಾದಂಬರಿಗಳು ಮಲೆನಾಡಿನ ಎಂಬತ್ತು ನೂರು ವರ್ಷಗಳ ಹಿಂದಿನ ಬದುಕನ್ನು ಚಿತ್ರಿಸುತ್ತವೆ. ಈ ಚಿತ್ರಣ ಪ್ರಾದೇಶಿಕ ಅಂಶಗಳ ದಟ್ಟ ಅನುಭವದೊಡನೆ ನಡೆಯುವುದರಿಂದ ಇವು ಕೇವಲ ಸಾಮಾಜಿಕ ಕಾದಂಬರಿಗಳಾಗಿ ಮಾತ್ರ ಉಳಿಯುವುದಿಲ್ಲ. ಕುವೆಂಪು ಕಾದಂಬರಿಗಳು ಮಲೆನಾಡಿನ ಪ್ರಕೃತಿಸೌಂದರ್ಯದ ಚಿತ್ರಶಾಲೆಗಳೆಂದು ಕರೆಯಬಹುದು. ಈ ಎಲ್ಲ ಅಂಶಗಳನ್ನು ಇಲ್ಲಿ ಗುರುತಿಸಲಾಗಿದೆ.

ಪ್ರಸ್ತುತ ಸಂದರ್ಭದಲ್ಲಿಯೂ ಕೂಡ ಕುವೆಂಪು ಕಾದಂಬರಿಗಳು ಅಧ್ಯಯನದ ಹಾಗೂ ಜೀವನವನ್ನು ಅರ್ಥೈಸಿಕೊಳ್ಳುವ ದೃಷ್ಟಿಯಿಂದ ಮುಖ್ಯವೆನಿಸುತ್ತವೆ. ಕುವೆಂಪು ಕಾದಂಬರಿಗಳಲ್ಲಿ ಬಂಡಾಯ ಪ್ರಜ್ಞೆಯನ್ನು ಇಟ್ಟುಕೊಂಡು ಒಂದು ಸಂಶೋಧನಾ ಪ್ರಬಂಧವನ್ನು ಬರೆಯುವಷ್ಟು ಸಾಮಾಗ್ರಿ ಈ ಎರಡೂ ಕಾದಂಬರಿಗಳಲ್ಲಿ ದೊರೆಯುವುದರಲ್ಲಿ ಅನುಮಾನವಿಲ್ಲ. ಅಂತಹ ಕಾರ್ಯವನ್ನು ಮಾಡಿದಲ್ಲಿ ಕುವೆಂಪು ಸಾಹಿತ್ಯಕ್ಕೆ ಮತ್ತೊಂದು ಆಯಾಮವನ್ನು ದೊರಕಿಸಿದಂತಾಗುತ್ತದೆ.

## ಆಕರಗ್ರಂಥಗಳು

೧. ಕಾನೂರು ಹೆಗ್ಗಡತಿ ಕುವೆಂಪು, ಉದಯರವಿ ಪ್ರಕಾಶನ, ಮೈಸೂರು, ೧೫ನೇ ಮುದ್ರಣ, ೨೦೧೦.

೨. ಕುವೆಂಪು ಮಲೆಯಲ್ಲಿ ಮದುಮಗಳು, ಉದಯರವಿ ಪ್ರಕಾಶನ, ಮೈಸೂರು, ೧೫ನೇ ಮುದ್ರಣ, ೨೦೧೦.

೩. ಅನಿಕೇತನ (ಸಂ) ಡಾ.ಶಿ.ಮರುಳಯ್ಯ(ಡಾ) ಶ್ರೀ ಕುವೆಂಪು ಕುರಿತ ಮಹಾ ಸಂಪುಟ ಸಪ್ನಬುಕ್ ಹೌಸ್, ಬೆಂಗಳೂರು-೯, ೨೦೦೫.

೪. ಕುವೆಂಪು ಕಾದಂಬರಿಗಳು, (ವಿಮರ್ಶಾ ಲೇಖನಗಳು) (ಸಂ) ಡಾ. ಗುರುಪಾದ ಮರಿಗುದ್ದಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೪.

೫. ಸಹ್ಯಾದ್ರಿಯ ಸೂರ್ಯ (ಶ್ರೀ ಕುವೆಂಪು ಕೃತಿ ಅವಲೋಕನ) (ಸಂ) ಚಕ್ಕೆರೆ ಶಿವಶಂಕರ್ (ಡಾ) ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-೧೮, ೨೦೦೪

೬. ಕುವೆಂಪು ಸಾಹಿತ್ಯ ವೈಚಾರಿಕ ನೆಲೆಗಳು, ಪ್ರದಾನ ಸಂಪಾದಕರು, ಡಾ.ಶ್ರೀಕಂಠಕೂಡಿಗೆ, ಪ್ರಸಾರಾಂಗ ಕುವೆಂಪು ವಿಶ್ವವಿದ್ಯಾಲಯ, ಶಂಕರಘಟ್ಟ, ಶಿವಮೊಗ್ಗ ಜಿಲ್ಲೆ, ೧೯೯೮.

೭. ಯುಗದ ಕವಿ ಜಗದ ಕವಿ (ಸಂ) ಆರ್.ಜಿ.ಹಳ್ಳಿನಾಗರಾಜ್ ಅನ್ವೇಷಣೆ ಪ್ರಕಾಶನ, ವಿಜಯನಗರ, ಬೆಂಗಳೂರು, ೨೦೦೪.

೮. ಕನ್ನಡದಲ್ಲಿ ದಲಿತ ಬಂಡಾಯ ಕಾದಂಬರಿಗಳು ಒಂದು ಅಧ್ಯಯನ, ಡಾ.ಎ.ಎಚ್. ಚಂದ್ರಶೇಖರ್, ವಿಜಯನಗರ, ಮೈಸೂರು, ೨೦೦೪.

೯. ಕುವೆಂಪು ಪುನರಾವಲೋಕನ, ಜಿ.ಎಸ್.ಶಿವರುದ್ರಪ್ಪ, ಅಂಕಿತ ಪ್ರಕಾಶನ, ಬಸವನಗುಡಿ, ಬೆಂಗಳೂರು, ೨೦೦೫.

೧೦. ಕುವೆಂಪು ಕಾದಂಬರಿಗಳ ಸಾಂಸ್ಕೃತಿಕ ಅಧ್ಯಯನ, ಡಾ. ಗುರುಪಾದ್ ಮರಿಗುದ್ದಿ, ಸಂಕೇಶ್ವರ ಬೆಳಗಾಂ, ೧೯೮೯.

೧೧. ಕುವೆಂಪು-ಕಾನೂರುಹೆಗ್ಗಡತಿ, ಉದಯರವಿ ಪ್ರಕಾಶನ, ಮೈಸೂರು, ೨೦೧೦.

೧೨. ಕುವೆಂಪು- ಮಲೆಗಳಲ್ಲಿ ಮದುಮಗಳು, ಉದಯರವಿ ಪ್ರಕಾಶನ, ಮೈಸೂರು, ೨೦೧೦.

೧೩. ಡಾ.ಗುರುಪಾದ ಮರಿಗುದ್ದಿ(ಸಂ) ಕುವೆಂಪು ಕಾದಂಬರಿಗಳು ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೪.

೧೪. ಕೀರ್ತಿನಾಥ ಕುರ್ತುಕೋಟಿ ಯುಗಧರ್ಮ ಹಾಗೂ ಸಾಹಿತ್ಯ ದರ್ಶನ ಧಾರವಾಡ-ಮನೋಹರ ಗ್ರಂಥಮಾಲೆ, ೨೦೦೨.

೧೫. ಡಾ. ಸಾ.ಶಿ. ಮರುಳಯ್ಯ ಅನಿಕೇತನ ಶ್ರೀ ಕುವೆಂಪು ಕುರಿತ ಮಹಾಸಂಪುಟ, ಸ್ವಪ್ನ ಬುಕ್ ಹೌಸ್, ಬೆಂಗಳೂರು, ೨೦೦೫.

೧೬. ಡಾ. ಶ್ರೀಕಂಠಕೂಡಿಗೆ (ಸಂ), ಕುವೆಂಪು ಸಾಹಿತ್ಯ ವೈಚಾರಿಕ ನೆಲೆಗಳು, ಪ್ರಚಾರಾಂಗ ಕುವೆಂಪು ವಿಶ್ವವಿದ್ಯಾನಿಲಯ, ಶಂಕರಘಟ್ಟ, ಶಿವಮೊಗ್ಗ, ೧೯೯೮.

೧೭. ಆರ್.ಜಿ.ಹಳ್ಳಿನಾಗರಾಜ್(ಸಂ) ಯುಗದ ಕವಿ ಜಗದಕವಿ, ಅನ್ವೇಷಣಾ ಪ್ರಕಾಶನ, ಬೆಂಗಳೂರು, ೨೦೦೪.

೧೮. ಜಿ.ಎಸ್.ಶಿವರುದ್ರಪ್ಪ, ಕುವೆಂಪು ಪುನರಾಲೋಕನ ಅಂಕಿತ ಪುಸ್ತಕ, ಬಸವನಗುಡಿ, ಬೆಂಗಳೂರು, ದ್ವಿತೀಯ ಮುದ್ರಣ, ೨೦೦೭.

೧೯. ತೇಜಸ್ವಿನಿ ನಿರಂಜನ, ಸೀಮಂತಿನಿ ನಿರಂಜನ(ಸಂ) ಸ್ತ್ರೀವಾದಿ ಸಾಹಿತ್ಯ ವಿಮರ್ಶೆ, ಕನ್ನಡ ಸಂಘ, ಬೆಂಗಳೂರು, ೧೯೯೪

೨೦. ಕುವೆಂಪು ವಿಚಾರ ಕ್ರಾಂತಿಗೆ ಆಹ್ವಾನ, ಉದಯರವಿ ಪ್ರಕಾಶನ, ಮೈಸೂರು, ಮೂರನೇ ಮುದ್ರಣ, ೧೯೯೮.

೨೧. ಬರಗೂರು ರಾಮಚಂದ್ರಪ್ಪ, ಸಂಸ್ಕೃತಿ, ಶ್ರಮ ಮತ್ತು ಸೃಜನಶೀಲತೆ, ಅಂಕಿತ ಪ್ರಕಾಶನ, ಬೆಂಗಳೂರು, ೨ನೇ ಮುದ್ರಣ, ೨೦೦೫.

೨೨. ಕುವೆಂಪು ರಸೋ ವೈ ಸಃ, ಉದಯರವಿ ಪ್ರಕಾಶನ, ಮೈಸೂರು, ೫ನೇ ಮುದ್ರಣ, ೧೯೯೭.

೨೩. ಎಲ್.ಎಸ್.ಶೇಷಗಿರಿರಾವ್, ಹೊಸಗನ್ನಡ ಸಾಹಿತ್ಯ ಬೆಂಗಳೂರು, ವಿಶ್ವವಿದ್ಯಾನಿಲಯ, ೧೯೭೫.

೨೪. ಗುರುಪಾದ ಮರಿಗುದ್ದಿ(ಸಂ) ಕುವೆಂಪು ಕಾದಂಬರಿಗಳ ಸಾಂಸ್ಕೃತಿಕ ಅಧ್ಯಯನ ಸಹ್ಯಾದ್ರಿ ಪ್ರಕಾಶನ, ಮೈಸೂರು, ೧೯೮೯.

೨೫. ಡಿ.ಆರ್.ನಾಗರಾಜ್, ಶಕ್ತಿಶಾರದೆಯ ಮೇಳ, ಅಕ್ಷರ ಪ್ರಕಾಶನ, ಸಾಗರ, ೧೯೮೭.

೨೬. ಮಳಲಿ ವಸಂತಕುಮಾರ (ಡಾ) ಕುವೆಂಪು ಅವರ ನಾಟಕಗಳು ಒಂದು ಅಧ್ಯಯನ ಮಹಾಪ್ರಬಂಧ, ಪಂಪ ಪ್ರಕಾಶನ, ಮಾನಸಗಂಗೋತ್ರಿ, ಮೈಸೂರು, ೧೯೯೫.

೨೭. ಪ್ರೊ.ಎಸ್.ಅನಂತನಾರಾಯಣ, ಹೊಸಗನ್ನಡ ಕವಿತೆಯ ಮೇಲೆ ಇಂಗ್ಲಿಷ್ ಪ್ರಭಾವ ಡಿ.ವಿ.ಕೆ.ಮೂರ್ತಿ, ಮೈಸೂರು, ೪ನೇ ಮುದ್ರಣ, ೨೦೦೦.

೨೮. ಐ.ಜಿ.ಮ್ಯಾಸೋರಿ ವಸಾಹತುಶಾಹಿ ಅನುಭವ ಮತ್ತು ಕನ್ನಡ ಕಾದಂಬರಿಗಳು ಮಹಾಪ್ರಂಬಂಧ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೮.

೨೯. ಕೆ.ಮರುಳಸಿದ್ದಪ್ಪ (ಡಾ) ಆಧುನಿಕ ಕನ್ನಡ ನಾಟಕ, ಅಂಕಿತ ಪ್ರಕಾಶನ, ಬೆಂಗಳೂರು, ೨೦೦೨.

೩೦. ದೇಜಗೌ, ಕುವೆಂಪು ದರ್ಶನ ವಿಚಾರ, ಸ್ವಪ್ನಬುಕ್ ಹೌಸ್, ಬೆಂಗಳೂರು, ಮಾರ್ಚ್ ೨೦೧೦.

೩೧. ಎ.ಎಸ್.ವೇಣುಗೋಪಾಲರಾವ್ (ಡಾ), ಶ್ರೀ ಕುವೆಂಪು ಅವರ ದಾರ್ಶನಿಕ ವಿಚಾರಗಳು, ರಾಷ್ಟ್ರಕವಿ ಕುವೆಂಪು ಪ್ರತಿಷ್ಠಾನ ಕುಪ್ಪಳ್ಳಿ, ತೀರ್ಥಹಳ್ಳಿ ತಾಲ್ಲೂಕು, ೧೯೯೪.

೩೨. ದೇಜಗೌ, ಕುವೆಂಪು ದರ್ಶನ, ಸಂಪುಟ ಮೂರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮.

೩೩. ದೇಜಗೌ, ಕುವೆಂಪು ಸಾಹಿತ್ಯ : ಕೆಲವು ಅಧ್ಯಯನಗಳು, ಸಹ್ಯಾದ್ರಿ ಪ್ರಕಾಶನ, ಮೈಸೂರು, ೧೯೮೯.

೩೪. ದೇಜಗೌ, ಕುವೆಂಪು ಸಾಹಿತ್ಯ ಕೆಲವು ಅಧ್ಯಯನಗಳು, ಸಂಪುಟ–೪, ಸಹ್ಯಾದ್ರಿ ಪ್ರಕಾಶನ, ಮೈಸೂರು, ೧೯೯೫.

೩೫. ದೇ.ಜವರೇಗೌಡ (ಪ್ರಧಾನ ಸಂಪಾದಕ), ಕುವೆಂಪು ಸಾಹಿತ್ಯ ಲೋಕ–೪, ಸಹ್ಯಾದ್ರಿ ಪ್ರಕಾಶನ, ಮೈಸೂರು , ೧೯೮೯.

೩೬. ದೇಜಗೌ (ಸಂಪಾದಕ), ಹೆಚ್.ಜೆ.ಲಕ್ಕಪ್ಪಗೌಡ, ಕುವೆಂಪು ಸಾಹಿತ್ಯ ತೌಲನಿಕ ಅಧ್ಯಯನ, ರಾಷ್ಟ್ರಕವಿ ಕುವೆಂಪು ಪ್ರತಿಷ್ಠಾನ, ಕುಪ್ಪಳ್ಳಿ ತೀರ್ಥಹಳ್ಳಿ ತಾಲ್ಲೂಕು, ೧೯೯೬.

೩೭. ಶಿವರಾಮ ಕಾಡನಕುಪ್ಪೆ, ಕುವೆಂಪು ಸಾಹಿತ್ಯ ವಿಚಾರ, ಸಹ್ಯಾದ್ರಿ ಪ್ರಕಾಶನ, ಮೈಸೂರು, ೧೯೯೦.

೩೮. ತಾರಿಣಿ ಚಿದಾನಂದ, ಮಗಳು ಕಂಡ ಕುವೆಂಪು, ಪುಸ್ತಕ ಪ್ರಕಾಶನ, ಮೈಸೂರು, ೨೦೦೬.

೩೯. ಕುವೆಂಪು ನೆನಪಿನ ದೋಣಿಯಲಿ, ಉದಯರವಿ ಪ್ರಕಾಶನ, ವಾಣಿವಿಲಾಸಪುರಂ, ಮೈಸೂರು, ೨೦೦೯.

೪೦. ದೇಜಗೌ, ಕುವೆಂಪು ದರ್ಶನ ವಿಚಾರ, ಸ್ವಪ್ನ ಬುಕ್ ಹೌಸ್, ಬೆಂಗಳೂರು, ೨೦೧೦.

೪೧. ಎಸ್.ಎಂ.ವೃಷಭೇಂಧ್ರಸ್ವಾಮಿ (ಡಾ), ತರಗತಿಗಳಲ್ಲಿ ಕುವೆಂಪು ತೌಲನಿಕ ಕಾವ್ಯಮೀಮಾಂಸೆ, ಪುಸ್ತಕ ಪ್ರಕಾಶನ, ಮೈಸೂರು, ೨೦೦೪.

೪೨. ಕೋ.ಚನ್ನಬಸಪ್ಪ, ಶ್ರೀ ಕುವೆಂಪು ದರ್ಶನ ಮತ್ತು ಪ್ರಸಂಗಗಳು, ತಳುಕಿನ ವೆಂಕಣ್ಣಯ್ಯ ಗ್ರಂಥಮಾಲೆ, ಮೈಸೂರು, ೨೦೦೨.

೪೩. ಎಲ್.ಎಸ್.ಶೇಷಗಿರಿರಾವ್(ಪ್ರೊ.) ಕುವೆಂಪು ಸಾಹಿತ್ಯ ಜಗತ್ತಿನಲ್ಲಿ ಸ್ವಪ್ನ ಬುಕ್‌ಹೌಸ್, ಬೆಂಗಳೂರು, ೨೦೦೮.

೪೪. ಫಾದರ್ ಡ್ಯಾನಿಯಲ್ ಫರ್ನಾಂಡಿಸ್ (ಸಂ.), ಕುವೆಂಪು ಸಾಹಿತ್ಯ ಸಂಪದ, ಕನ್ನಡ ಸಂಘ, ಬೆಂಗಳೂರು, ೨೦೦೭.

೪೫. ಕೋ. ಚನ್ನಬಸಪ್ಪ, ಕುವೆಂಪು ಸಾಹಿತ್ಯದಲ್ಲಿ ವೈಚಾರಿಕತೆ, ಸಾಮಾಜಿಕ ನಿಷ್ಠೆ, ನವಕರ್ನಾಟಕ ಪ್ರಕಾಶನ, ಬೆಂಗಳೂರು, ೨೦೦೬.

